ಕೀರ್ತಿಕಿರಣ ಗ್ರಂಥಮಾಲೆಯ ಏಳನೆಯ ಕುಸುಮ

# “ರೋಹಿಣಿ”

(೯ ಸಣ್ಣ ಕತೆಗಳು)



ಕತೆಗಾರರು :

## ಶ್ರೀ ಬಾಲಶ್ರೀ



ಪ್ರಕಾಶಕರು :

ಆರ್. ಎಚ್. ನ್ಯೂಸ್ ಏಜೆನ್ಸಿ,

೬೬೫, ಚಿಕ್ಕಪೇಟೆ, :: ಬೆಂಗಳೂರು ಸಿಟಿ.

೧೯೪೫.] [ಬೆಲೆ ೦-೧೨-೦

# ಪ್ರಕಾಶಕರ ನುಡಿ

ಕನ್ನಡ ಸಣ್ಣ ಕತೆಗಳನ್ನೋದುವವರಿಗೆಲ್ಲ ಶ್ರೀ 'ಬಾಲಶಶಿ'ಯವರ ಪರಿಚಯವಿದೆ. ಅವರ ಕತೆಗಳನ್ನು ಓದಿ ಸಂತೋಷಿಸದವರಿಲ್ಲ. ಅವರ ಕತೆಗಳಲ್ಲಿ ಒಂದು ನೂತನತೆಯಿದೆ; ಒಂದು ಮೋಹಕಶಕ್ತಿ ಇದೆ. ಓದುಗರು ಅವನ್ನೆಲ್ಲ ಮೆಚ್ಚಿಕೊಂಡಿದ್ದಾರೆ.

ಈ ಸಂಕಲನದಲ್ಲಿ ಪ್ರಕಟವಾಗಿರುವ ಒಂಭತ್ತು ಕತೆಗಳೂ ಸಮಾಜ ಜೀವನಕ್ಕೆ ಸಂಬಂಧಿಸಿದುವು. ಪ್ರತಿ ಕತೆಯಲ್ಲೂ ಜನಜೀವನವನ್ನು ಒಳ ಹೊಕ್ಕು ಕಣ್ತೆರದು ನೋಡುವ ಲೇಖಕರ ಸ್ವಭಾವ ಎದ್ದು ಕಾಣುತ್ತದೆ. ಇದ್ದುದನ್ನು ಇದ್ದಂತೆ ಚಿತ್ರಿಸುವ ಶಕ್ತಿ ಶ್ರೀ 'ಬಾಲಶಶಿ'ಯವರಿಗಿದೆ ಎನ್ನು ವುದಕ್ಕೆ ಈ ಸಂಕಲನದ ನವರತ್ನಗಳೇ ಸಾಕ್ಷಿ. ಶ್ರೀಯುತರ ಸತತ ಪ್ರಯತ್ನ ದಿಂದ ಕನ್ನಡ ಕಥಾಸಾಹಿತ್ಯದ ಹೊನಲು ಉಕ್ಕಿ ಹರಿದು, ನಾಡು ಹಿರಿಮೆಗಳಿ ಸಲಿ ಎಂದು ಹಾರೈಸುತ್ತೇವೆ.

ಈ ಕತೆಯನ್ನು ಪ್ರಕಟಣೆಗಾಗಿ ಕೊಟ್ಟು ನಮಗೆ ಅನೇಕ ವಿಧದಲ್ಲಿ ನೆರ ವಾಗುತ್ತಿರುವ ಸನ್ಮಿತ್ರರಾದ ಶ್ರೀ 'ಬಾಲಶಶಿ' ಅವರಿಗೂ, ಮುಖಪತ್ರಕ್ಕೆ ಅಂದ ವಾದ ಚಿತ್ರವನ್ನು ಬರೆದುಕೊಟ್ಟು ಉಪಕರಿಸಿದ ಶ್ರೀ ಕೆ. ಆರ್. ಗೋಪಾಲ ಕೃಷ್ಣ, ಬಿ.ಎಸ್‌ಸಿ., ಅವರಿಗೂ ನಮ್ಮ ಕೃತಜ್ಞತೆಗಳು ಮುಡಿಪಾಗಿವೆ.

ಈ ಸಂಕಲನದ ಮೊದಲೆಂಟು ಕತೆಗಳು 'ಕತೆಗಾರ'ನಲ್ಲೂ, 'ರೋಹಿ[illegible] ಎಂಬ ಕತೆ 'ಕಥಾಂಜಲಿ'ಯಲ್ಲೂ ಪ್ರಕಟವಾದುವು. ಆ ಪತ್ರಿಕೆಗಳ ಸಂಪಾ[illegible] ಕರಿಗೂ, ಅಚ್ಚಿಗೆ ಅವಕಾಶವಿತ್ತ ಮದ್ರಾಸ್ ಸರ್ಕಲ್ ಕೋ-ಆಪರೇಟಿ[illegible] ಸೊಸೈಟಿ ರಿಜಿಸ್ಟ್ರಾರ್ ಅವರಿಗೂ ನಮ್ಮ ವಂದನೆಗಳು.

—ಪ್ರಕಾಶಕರು.

# ಸೊಸೆ

ಲಲಿತೆ ಬಾಲವಿಧವೆ. ಮದುವೆಯಾದ ಮೂರು ತಿಂಗಳಿಗೆ ಗಂಡ ಸಿಡುಬಿನಲ್ಲಿ ಸತ್ತ. ಲಲಿತೆ ಕುಂಕುಮ ಪಳಿಸಿದಳು. ಒಂದೆರಡು ತಿಂಗಳ ನಂತರ ಕಣ್ಣೀರನ್ನೊರೆಸಿ ಮುಖ ತೊಳೆದುಕೊಂಡು, ತನ್ನ ವಿದ್ಯಾಭ್ಯಾಸ ವನ್ನು ಮುಂದುವರಿಸಿದಳು.

ಅವಳು ಆಗ ತಾನೇ ಇಂಟರ್ ಮಿಾಡಿಯಟ್ ಪಾಸುಮಾಡಿದ್ದಳು. ಎಂ. ಬಿ. ಬಿ. ಎಸ್ಸಿಗೆ ಸೇರಿ ಮೆಟ್ಟಲು ಮೆಟ್ಟಲಾಗಿ ಪರೀಕ್ಷೆಗಳನ್ನು ಪಾಸು ಮಾಡಿಕೊಂಡು ಬಂದಳು. ಪ್ರಭು ಒಂದೊಂದು ಪರೀಕ್ಷೆಯಲ್ಲೂ ಒಂದು ವರ್ಷ ಎರಡು ವರ್ಷ ಎಡವಿ, ಮುಗ್ಗರಿಸಿ, ಬಿದ್ದೆದ್ದು ಬಂದ. ಇಬ್ಬರೂ ಕೊನೆಯ ತರಗತಿಯಲ್ಲಿ ಸಹಪಾಠಿಗಳಾದರು. ಇಬ್ಬರಿಗೂ ದೂರದ ಬಳಗ.

ಕ್ಲಾಸಿನಲ್ಲಿ ಕೂತಾಗಲೆಲ್ಲ ಲಲಿತೆಯನ್ನು ಕದ್ದು ನೋಡುವುದೇ ಪ್ರಭು ವಿಗೆ ಕೆಲಸ. ನೋಡಿ ನೋಡಿದಷ್ಟೂ ಅವನಿಗೆ ದಣಿವು ದೂರವಾಗುವುದು. ಪ್ರಾಕ್ಟಿಕಲ್ ಕ್ಲಾಸಿನಲ್ಲಿ ಇಬ್ಬರೂ ಜೊತೆಯಲ್ಲಿಯೇ ಕೂಡುತ್ತಿದ್ದರು. ಆಗ ಅವನ ಆನಂದಕ್ಕೆ ಮಿತಿಯೇ ಇಲ್ಲ.

ಒಂದು ದಿನ ಪ್ರಾಕ್ಟಿಕಲ್ ಕ್ಲಾಸಿನಲ್ಲಿ ಹೀಗೆ ಅವನು ಬಿಚ್ಚುಗಣ್ಣಿಂದ ನೋಡುತ್ತಿದ್ದಾಗ ಅವಳು ತಲೆಯೆತ್ತಿ ನೋಡಿದಳು; ಪುನಃ ನಾಚಿಕೆ ಯಿಂದ ತಲೆತಗ್ಗಿಸಿಬಿಟ್ಟಳು. ಪ್ರಭು ತನ್ನನ್ನು ಪ್ರೀತಿಯಿಂದ ಪ್ರೀತಿಸು ತ್ತಾನೆಂದು ಈ ಮುಂಚೆ ಅವಳಿಗೆ ಸುಳಿವು ತೋರಿತ್ತು. ಈಗ ಅದು ನಿರ್ಧಾರವಾಗಿ ಹೋಯ್ತು. ಆದರೆ ಅವನು ಹಾಗೆ ಪ್ರೀತಿಸುವುದು ತನಗೆ ಧರ್ಮವೇ ಎಂದು ಪೃಚ್ಛಿಸಿಕೊಂಡಾಗ ಅವಳೊಂದು ನಿಟ್ಟುಸಿರುಬಿಟ್ಟಳು. ತಾನು ಬಾಳುಕೆಟ್ಟವಳು, ಕುಂಕುಮ ಅಳಿಸಿದವಳು, ಬಿಚ್ಚು ತುರುಬಿನ ವಳು, ವಿಧವೆ! ಗಂಡ ಸತ್ತ ಚಂಡಾಲಿ; ಆಜೀವ ಪರ್ಯಂತ ಒಂಟಿ ಯಾಗಿ, ಒಬ್ಬಂಟಿಯಾಗಿ ಬದುಕಬೇಕಾದ ಪಾಪಿನಿ!

ಅವಳ ಕಣ್ಣಿಂದ ಒಂದು ತೊಟ್ಟು ಹನಿ ಮೇಜದ ಮೇಲಿದ್ದ ಪುಸ್ತಕದ ಮೇಲೆ ತೊಪ್ಪನೆ ಬಿತ್ತು. ಅದನ್ನು ಪ್ರಭು ನೋಡಿದ.

"ಲಲಿತ"

"ಆ್ಞ?"

"ಅಳುತ್ತೀಯಲ್ಲ?"

" ಇಲ್ಲ. "

ಲಲಿತ ಸೆರಗಿನಿಂದ ಕಣ್ಣೊರಸಿಕೊಂಡಳು. ಪ್ರಭು ಮುಂದೆ ಪ್ರಶ್ನೆ ಮಾಡಲಿಲ್ಲ. ಅವಳು ಏಕೆ ಅತ್ತಳೆಂದು ಅವನಿಗೆ ಸ್ಪಷ್ಟವಾಗಿತ್ತು. ಅಂದು ರಾತ್ರಿಯೆಲ್ಲ ಅವನು ಅವಳ ಬಗೆಯನ್ನು ನೆನೆದು ನೆನೆದು ಚಿಂತಿಸಿದ. ಏನೇನೋ ಗುಣಾಕಾರ ಹಾಕಿದ. ಆ ಕ್ಷಣವೇ ಅವಳನ್ನು ಹಿಡಿದು ಎತ್ತಿ ಕೊಂಡು ಹೋಗಿ ಬೊಂಬಾಯಿ, ಮದರಾಸು, ಡೆಲ್ಲಿ, ಲಂಡ‌ರ್, ಅಮೆರಿಕಾ, ಜರ್ಮ‌ರ್, ಟಾಸ್ಮೇನಿಯಾ ಎಲ್ಲಾ ಕಡೆಗಳಲ್ಲೂ ಸುತ್ತಿಕೊಂಡು ಬರಬೇಕೆಂದು ತವಕಗೊಂಡ. ಅವಳ ದುಃಖವನ್ನು ಹೇಗಾದರೂ ಮರೆಸಬೇಕು. ಬರಡು ಮರವನ್ನು ಹೇಗಾದರೂ ಚಿಗುರಿಸಬೇಕು. ದುರ್ಮಾರ್ಗವಾಗಿ ಬೇಡ. ಸತ್ಯ ಸದ್ಧರ್ಮವಾಗಿ, ಅಷ್ಟ ದಿಕ್ಕುಗಳ ಸಾಕ್ಷಿಯಾಗಿ, ಚಂದ್ರಸೂರ್ಯರು, ಹದಿನಾಲ್ಕು ಲೋಕಗಳಲ್ಲಿರುವ ದೇವ ದೇವತೆಗಳ ಸಾಕ್ಷಿಯಾಗಿ, ಅವಳ ಕೈಹಿಡಿದು ಅವಳ ಗೆಲವನ್ನು ಒಲಿಸಬೇಕು ....

ಹೀಗೆ ಏನೇನೋ ಚಿಂತಿಸುತ್ತ ಮಲಗಿದ. ಮರುದಿನ ಕ್ಲಾಸಿನಲ್ಲಿ ಕಂಡಾಗ ಲಲಿತೆಯನ್ನು ಬಾಯಿಬಿಚ್ಚಿ ಕೇಳಿಬಿಡುವುದೆಂದು ನಿರ್ಧರಿಸಿ ಕೊಂಡ. ಆದರೆ ಅವಳನ್ನು ಕಂಡ ಕೂಡಲೆ ಹೇಗೆ ಆರಂಭಿಸಬೇಕೆಂದು ಅವನಿಗೆ ತೋರಲೇ ಇಲ್ಲ. ಅವಳು ಕ್ಲಾಸಿಗೆ ಎಂದಿನಂತೆ ಮೌನವಾಗಿ ಬಂದು ಮೌನವಾಗಿ ಹೊರಟುಹೋದಳು. ಪ್ರಭು ಆ ರಾತ್ರಿ ತನ್ನ ಎದೆ ಯನ್ನೆಲ್ಲ ಬಿಚ್ಚಿ ಕಾಗದದಲ್ಲಿ ಬರೆದಿಟ್ಟು ನಿದ್ದೆಹೋದ.

೦ ೦ ೦

" ಪ್ರಭು ಇನ್ನು ಮೇಲೆ ಇಂಥ ಕಾಗದ ಬರೀಬೇಡಿ. "

" ನನ್ನ ಎದೆಯೊಳಗಿಂದ ಬಂದ ಕಾಗದ ಲಲಿತ ಅದು. ಬಾಯಲ್ಲಿ ಹೇಳಹೋದರೆ ಗಂಟಲು ಕಟ್ಟಿಕೊಳ್ಳುತ್ತೆ. ಅಷ್ಟನ್ನು ಹೇಳಲು ಈಗ ಸಾಧ್ಯವೂ ಇಲ್ಲ. ನಿನಗೆ ನನ್ನಲ್ಲಿ ಪ್ರೀತಿ ಇಲ್ಲವಾದರೆ ಹೇಳಿಬಿಡು, ಖಂಡಿ ತವಾಗಿ ನಿನ್ನ ಗೋಜಿಗೆ ಬರೋಲ್ಲ "

" ಅಯ್ಯೋ ಅದಲ್ಲ ಪ್ರಭು. ಹೆಂಗಸರ ಮನಸ್ಸು ಗಂಡಸರಿಗೆ ಏನು ಗೊತ್ತಾಗುತ್ತೆ ಹೇಳಿ? ವೃಥಾ ಕಾಗದಗಳನ್ನು ಬರೆದು ನನ್ನ ಮನಸ್ಸನ್ನೂ ನೋಯಿಸಿ, ನಿಮ್ಮ ಮನಸ್ಸನ್ನೂ ನೋಯಿಸಿಕೊಳ್ಳುತ್ತೀರಿ ನೋಡಿ. "

"ಅಂದರೆ ನನ್ನ ಮೇಲೆ ನಿನಗೆ" ....

"ಮತ್ತೆ ಮತ್ತೆ ಅದನ್ನೇ ಹೇಳುತ್ತೀರಲ್ಲ. ಇನ್ನು ಮೇಲೆ ಹೀಗೆಲ್ಲ ಬರೆಯಬಾರದು, ಅಷ್ಟೆ" ಎನ್ನುತ್ತ ಲಲಿತ ಪುಸ್ತಕಗಳನ್ನು ಜೋಡಿಸಿಕೊಂಡು ಹೊರಗೆ ಹೊರಟುಹೋದಳು. ಪ್ರಭುವಿಗೆ ದಿಕ್ಕೇ ತೋರಲಿಲ್ಲ. ತಾನೂ ಪುಸ್ತಕಗಳನ್ನು ಬೈಸಿಕಲ್ಲಿಗೆ ಕಟ್ಟಿ ಸಿಗರೇಟು ಸೇದುತ್ತ ಸಿನಿಮಾಕ್ಕೆ ಹೊರಟ.

ಒಂದೆರಡು ದಿನ ಇಬ್ಬರೂ ಮಾತಾಡಲಿಲ್ಲ. ಒಂದು ಮಧ್ಯಾಹ್ನ ಅವರು ಪ್ಲೇಗು ಹಿಡಿದ ಇಲಿಯನ್ನು ಕುಯಿದು ಭೂತ ಕನ್ನಡಿಯಲ್ಲಿ ಪರೀಕ್ಷಿಸುತ್ತಿದ್ದರು. ಆಗ ಲಲಿತೆ ಪ್ರಭುವನ್ನು ಕಡೆಗಣ್ಣಿಂದ ನೋಡಿದಳು. ಅದನ್ನರಿತ ಪ್ರಭುವಿನ ಮುಖ ಇಷ್ಟಗಲ ಅರಳಿತು. ಮೃದುವಾಗಿ ನಕ್ಕ. ಅವಳೂ ಮುಗುಳು ನಕ್ಕಳು.

"ಲಲಿತ ನನ್ನ ಮೇಲೆ ಕೋಪವೆ ?"

"ಇಲ್ಲ."

"ಮತ್ತೆ, ಇಷ್ಟು ದಿನ ಮಾತೇ ಆಡಿಸಲಿಲ್ಲ ?"

"ಏನೆಂತ ಮಾತಾಡಿಸಲಿ ?"

ಪ್ರಭು ಉತ್ತರ ಕೊಡಲಾರದೆ ಹೋದ. "ಹಾಗಾದರೆ ಕೋಪವಿಲ್ಲ ತಾನೇ ?" ಎಂದು ಅಗಲವಾಗಿ ನಗುತ್ತ ಕೇಳಿದ.

"ಅಯ್ಯೋ ಸುಮ್ಮನಿರಿ. ಪ್ರೊಫೆಸರ್ ಬರ್‍ತಾ ಇದ್ದಾರೆ." ಎನ್ನುತ್ತ ಲಲಿತ ತನ್ನ ಕೆಲಸಕ್ಕೆ ತೊಡಗಿದಳು. ಪ್ರಭುವೂ ಭೂತ ಕನ್ನಡಿಯನ್ನು ಕಣ್ಣಿಗೆ ಹೊಂದಿಸಿಕೊಳ್ಳುತ್ತ ತಲೆತಗ್ಗಿಸಿದ. ಪ್ರೊಫೆಸರ್ ಅತ್ತ ಹೊರಟುಹೋದ ಮೇಲೆ ಪ್ರಭು ಜೇಬಿಗೆ ಕೈಹಾಕಿ ಭಾರವಾದ ಕವರನ್ನು ತೆಗೆದು ಲಲಿತೆಯ ನೋಟು ಬುಕ್ಕಿನಲ್ಲಿ ಸೇರಿಸಿಟ್ಟ. ಅವಳು ಬಿರುಗಣ್ಣಿಂದ ಪ್ರಭುವನ್ನು ನೋಡಿದಳು.

"ಕ್ಷಮಿಸು ಲಲಿತ. ಬೇಡಾ ಅಂದರೆ ಇನ್ನು ಮೇಲೆ ಕಾಗದವೇ ಬರೆಯೊಲ್ಲ." ಎನ್ನುತ್ತ ಪ್ರಭು ಸುಮ್ಮನಾದ. ಲಲಿತೆ ತನ್ನ ಕೆಲಸವನ್ನು ಮುಗಿಸಿಕೊಂಡು ಹೊರಗೆ ಬಂದಳು. ಕಾಗದವನ್ನು ತೆರೆದು ಓದಿದಳು. ಓದಿದ ನಂತರ ಮಡಿಯಲ್ಲಿ ಸೆಕ್ಕಿಸಿಕೊಂಡಳು. ರಾತ್ರಿ ಹಾಸಿಗೆಯಲ್ಲಿ

ಮಲಗಿಕೊಂಡು ಇನ್ನೊಮ್ಮೆ ಓದಿ ಎದೆಗೆ ಅಪ್ಪಿಕೊಂಡು ಮಲಗಿದಳು.

ಮರುದಿನ ಪ್ರಭು ಕೇಳಿದ. " ಲಲಿತ, ಪತ್ರವನ್ನು ಓದಿದೆಯಾ ?

" ಇಲ್ಲ. " ಲಲಿತ ನಗುತ್ತ ಉತ್ತರವಿತ್ತಳು.

" ನನ್ನ ಮನಸ್ಸು ನಿನಗಿನ್ನೂ ಗೊತ್ತಾಗಿಲ್ಲ ಲಲಿತ, ನಿನ್ನದು ಕಲ್ಲೆದೆ "

" ಹೌದು "

" ಹಾಗಾದರೆ ನಾನು ಕಾಗದದಲ್ಲಿ ಕೇಳಿದ ಪ್ರಶ್ನೆಗೆ ಇದೇ ತಾನೇ ಉತ್ತರ ? "

" ನಿಮ್ಮ ಪ್ರಶ್ನೆಗೆ ಉತ್ತರವೇ ಇಲ್ಲ ಪ್ರಭು "

" ಅಂದ ಮೇಲೆ ನಿನಗೆ ನನ್ನಲ್ಲಿ .... "

" ಅಯ್ಯೋ, ತಿರುಗ ಅದೇ ಮಾತೇ ಹೇಳುತ್ತೀರಲ್ಲ. ನಿಮ್ಮನ್ನು ಪ್ರೀತಿಸುತ್ತೇನೆಂದು ಹೇಳಿ ನಿಮ್ಮನ್ನು ಅಧರ್ಮಕ್ಕೆಳೆಯಲೆ ? "

" ಬೇಡ ಬೇಡ. ಪ್ರತ್ಯಕ್ಷವಾಗಿ ನಿನ್ನನ್ನು ಮದುವೆ ಆಗುತ್ತೇನೆಂದು ಸಾರಿಸಾರಿ ಹೇಳಿದೆನಲ್ಲ ? "

" ಪ್ರಭು, ಸುಮ್ಮನೆ ಹೀಗೇಕೆ ದುಡುಕುತ್ತೀರಿ ? ಈ ಭ್ರಾಂತಿ ಬೇಡ. ಚೆನ್ನಾಗಿ ಯೋಚಿಸಿದ್ದೀರಾ ? ಇದು ನಿಮಗೆ ಶ್ರೇಯಸ್ಕರವೆ ? ನಿಮ್ಮನ್ನು ಮನೆ ಮಂದಿ ಮೆಚ್ಚುತ್ತಾರೆಯೆ ? ನಿಮ್ಮ ತಂದೆ ಒಪ್ಪಿದ್ದಾರೆಯೆ ? ತಾಯಿ ಒಪ್ಪಿದ್ದಾರೆಯೆ? ಅವರನ್ನು ಕೇಳದೆ ನಿಮ್ಮಿಷ್ಟಕ್ಕೆ ನೀವು ಹೀಗೆ ಮಾಡೇನು, ಹಾಗೆ ಮಾಡೇನು ಎಂದರೆ ಅಧ್ಯಾಯ ಮುಗಿದುಹೋಯ್ತೇನು ? "

" ನೀನು ಒಪ್ಪಿದರೆ ಸಾಲದೆ ಲಲಿತ ? ನೀನೇ ನನಗೆ ಶ್ರೇಯಸ್ಸು. ನೀನು ಒಪ್ಪಿದರೆ ಎಲ್ಲರೂ ಒಪ್ಪಿದ ಹಾಗೆ. ತಾಯ್ತಂದೆಗಳ ಮಾತುಬಿಡು. ತಂದೆ ತಾಯಿಯ ನೆಳಲು. ನಾಳೆಯೇ ನಮ್ಮ ತಾಯಿಯ ಕೈಲಿ ಒಪ್ಪಿಗೆ ಪಡೆದು ಮದುವೆ ಮಾಡಿಕೋತೇನೆ ನೋಡು. ತಪ್ಪಿದರೆ ನನಗೆ ಅಡ್ಡ ಹೆಸರಿಡು "

" ದುಡುಕಬೇಡಿ ಪ್ರಭು. ಇದೆಲ್ಲ ಒಂದೆರಡು ನಿಮಿಷದಲ್ಲಿ ಮುಗಿಯುವ ಕೆಲಸವಲ್ಲ. ಪರೀಕ್ಷೆ ಇನ್ನೊಂದು ತಿಂಗಳಿದೆ, ಅದು ಮುಗಿಯಲಿ. ಆ ಮೇಲೆ ನಿಮ್ಮ ತಾಯೀನ ಒಪ್ಪಿಸಿ. ಈಗಾಗಲೇ ಈ ಗೊಂದಲದಲ್ಲಿ

ಬಿದ್ದುಬಿಟ್ಟರೆ ಪರೀಕ್ಷೆ ಕೆಟ್ಟುಹೋದೀತು."

"ಅಂತೂ ಅವರೆಲ್ಲರೂ ಒಪ್ಪಿದರೆ ನಿನ್ನ ಅಡ್ಡಿ ಇಲ್ಲಲ್ಲ? ಅದು ಮೊದಲು ಹೇಳು"

"ಅಯ್ಯೋ ಹೋಗಿ, ನಿಮ್ಮ ತಾಯೀನ ಮೊದಲು ಒಪ್ಪಿಸಿ"

೦ ೦ ೦

ಪರೀಕ್ಷೆಯು ಮುಗಿಯಿತು. ಅದರ ಫಲಿತಾಂಶವೂ ತಿಳಿಯಿತು. ಇಬ್ಬರೂ ಪಾಸಾಗಿದ್ದರು. ಅಷ್ಟರೊಳಗೆ ಪ್ರಭು ತಾಯಿಯೆಡೆ ಅತ್ತೂ ಕರೆದೂ ಹೆದರಿಸಿ ಬೆದರಿಸಿದ್ದ. ಅವರ ತಾಯಿ ಕಮಲಮ್ಮ ಕರ್ನಾಟಕ ಸಂಪ್ರದಾಯದವರು.

"ಇಲ್ಲದ ಸಲ್ಲದ ಸಂಬಂಧ ಹೊಸದಾಗಿ ಬೆಳಸಬಾರದೋ ಪ್ರಭು. ತಾಲಿ ಕಿತ್ತ ಹುಡುಗೇರನ್ನು ಮತ್ತೆ ಹಸೇ ಮೇಲೆ ಕೂಡಿಸಬಾರದು ಕಣೋ. ಶ್ರೇಯಸ್ಕರವಲ್ಲವೋ' ಎಂದು ಬೇಡಿಕೊಂಡರು ಕಮಲಮ್ಮ.

"ನನಗೆ ಶ್ರೇಯಸ್ಸು ಬೇಡ, ಅವಳು ಬರಲಿ ಸಾಕು"

"ಚೆನ್ನಾಯಿತು, ಚೆನ್ನಾಯಿತು! ಅದೇನು ಮಾಟ ಮಾಡಿ ಕಣ್ಣು ಕಟ್ಟಿಬಿಟ್ಟಿದ್ದಾಳೋ ಗೊತ್ತಿಲ್ಲವಲ್ಲ ಆ ಹುಡುಗಿ! ಗಂಡ ಸತ್ತ ರಂಡೇರನ್ನು ಮಾಡಿಕೊಂಡರೆ ಅಲ್ಪಾಯುಸ್ಸಂತೆ ಕಣೋಪ್ಪ-ಹೆತ್ತ ತಾಯಿ ಇದನ್ನೆಲ್ಲ ಹೇಳಬಾರದು ನೋಡು"

"ಚಿಂತೆ ಇಲ್ಲಮ್ಮ. "ನೀನು ನಾಳೆಯೇ ಸತ್ತುಹೋಗುವಿ" ಅಂತ ಕೂಡ ಹೇಳು, ನನಗೇನೂ ಅಂಜಿಕೆಯಿಲ್ಲ. ಸತ್ತ ಹೆಣಗಳನ್ನು ದಿನ ಬೆಳಗೂ ಕೈಯಾರ ಕೊಯ್ದು ಮೂಸಿನೋಡುವ ನನಗೆ ಸಾವಿನಿಂದ ಯಾವ ಭಯವೂ ಇಲ್ಲ. ನಾನು ಸತ್ತುಹೋದೇನೆಂದು ನಿನಗೆ ಭಯವೂ ಬೇಡ. ಇದೋ ನೋಡಮ್ಮ ಲಲಿತೇನೇ ನನಗೆ ಹೆಂಡತಿ. ಅದು ಆಗುವುದಿಲ್ಲ ವೆಂದರೆ ಒಂದೇ ಮಾತಿನಲ್ಲಿ ಹೇಳಿಬಿಡು. ಈಗಿಂದೀಗಲೇ ಸಂನ್ಯಾಸವನ್ನು ತೆಗೆದುಕೊಂಡು ದೇಶಾಂತರ ಹೊರಟುಹೋಗುತ್ತೇನೆ, ಖಂಡಿತ."

ಕಮಲಮ್ಮನಿಗೆ ಇದು ಒಳ್ಳೇ ಪೇಚಾಟಕ್ಕಿಟ್ಟುಕೊಂಡಿತು. ತಲೆ ತಲಾಂತರದಿಂದ ಬಂದ ಸಂಪ್ರದಾಯವನ್ನೆಲ್ಲ ಮೂಲೆಗೊತ್ತಿ ಹೀಗೆಲ್ಲ ಹುಚ್ಚುಹುಚ್ಚಾಗಿ ನಡೆಯುತ್ತಾನಲ್ಲ, ಎಂದು ಮಗನ ಮೇಲೆ ಆಕೆಗೆ ಆಗ್ರಹ

ಬಂದಿತು. ಆದರೆ ಮಗ ಒಂದೇ ಹಠದಿಂದ ಕೂತಿದ್ದ. ಸಂನ್ಯಾಸಿಯಾಗಿ ಹೊರಟು ಹೋಗುತ್ತೇನೆಂದು ಬೆದರಿಸಿದ್ದ. ಆಕೆಗೆ ಕರುಳು ಚುಚ್ಚಿತು. ಹೇಗಾದರೂ ಮಗನು ನೆಮ್ಮದಿಯಾಗಿರಬೇಕಾದುದು ಆಕೆಯ ಆಕಾಂಕ್ಷೆ. ಯಾವ ಹುಡುಗಿಯನ್ನು ಮದುವೆ ಮಾಡಿಕೊಂಡರೇನಂತೆ? ಎಂದು ತನ್ನಲ್ಲಿ ತಾನೇ ಸಮಾಧಾನಪಟ್ಟುಕೊಂಡಳು. "ನಿನ್ನಿಷ್ಟ ಬಂದಂತೆ ಮಾಡಿಕೋ ಹೋಗು, ಎಲ್ಲಿಯಾದರೂ ಸುಖವಾಗಿದ್ದರೆ ಸರಿ. ಸಂನ್ಯಾಸಿಯಾಗಿ ಮಾತ್ರ ಹೋಗಬೇಡ" ಎಂದು ಗೊಣಗಿದರು.

ಮದುವೆ ಆಯಿತು. ತೀರ ಹತ್ತಿರದ ಬಳಗದವರಿಗೆ ಹೇಳಿ ಕಳುಹಿಸಿ ಸದ್ದಿಲ್ಲದಂತೆ ಪಶ್ಚಿಮವಾಹಿನಿಯಲ್ಲಿ ಒಂದು ದಿನ ತಾಲಿ ಕಟ್ಟಿ, ಸಪ್ತಪದಿ ನಡೆಸಿದರು. ಅಂದವಾಗಿ ಮುದ್ರಿಸಿದ ಲಗ್ನಪತ್ರಿಕೆಗಳು ಮದುವೆಯ ಮಾರನೆಯ ದಿನ ಎಂಟು ದಿಕ್ಕುಗಳಿಗೂ ಹಂಚಿಕೆಯಾಯಿತು.

ಲಲಿತ ಮನೆಗೆ ಬಂದಾಗ ಕಮಲಮ್ಮನಿಗೆ ಮನಸ್ಸಿನಲ್ಲಿಯೇ ಸುರುಸುರು ಅನ್ನಿಸಿತು. ಕೆಟ್ಟುಹೋದ ಹುಡುಗಿಯನ್ನು ಮನೆಗೆ ಸೇರಿಸಿದೆವಲ್ಲ ಎಂತ ಆಕೆಗೆ ಆಗ್ರಹ ಇನ್ನೂ ಆರಲಿಲ್ಲ.

"ನೀರು ಕಾದಿದೆ ಅತ್ತೆಮ್ಮ. ಮಡಿ ಉಟ್ಟುಕೊಂಡು ಬಂದು ಎಸರಿಗಿಡುತ್ತೇನೆ" ಎಂದಳು ಲಲಿತ, ಒಂದು ಬೆಳಿಗ್ಗೆ ಕಾಫಿ ಕುಡಿಯುತ್ತ.

"ಆ್ಞ!" ಎಂದು ಗರ್ಜಿಸಿದಳು ಕಮಲಮ್ಮ. ಲಲಿತ ಮುಂದೆ ಮಾತಾಡಲಿಲ್ಲ. ಘರ್ಜನೆಯ ಕೋಪವನ್ನೆಲ್ಲ ನುಂಗಿಕೊಂಡ ಮೇಲೆ ಕಮಲಮ್ಮ ಹೇಳಿದಳು. "ನಾನೇ ಮಡಿ ಉಟ್ಟುಕೊಂಡು ಎಸರಿಗಿಟ್ಟುಕೋತೇನಮ್ಮ. ನೀನು ಇದೋ ಈ ಪಾತ್ರೆಗಳನ್ನೆಲ್ಲ ತೊಳೆದು ಹಿತ್ತಲಿನಲ್ಲಿ ನಲ್ಲಿ ಕೆಳಗೆ ಇಟ್ಟಿರು; ಶುದ್ಧಮಾಡಿ ಒಳಗೆ ತಂದಿಟ್ಟುಕೋತೇನೆ"

ಹೀಗೆ ಹೇಳುತ್ತ ಕಮಲಮ್ಮ ಕಾಫೀ ಪಾತ್ರೆಗಳನ್ನೂ ಉಪ್ಪಿಟ್ಟಿನ ಬಾಣಲೆಯನ್ನೂ ಹೊರಕ್ಕೆ ಹಾಕಿದರು. ಲಲಿತೆ ಅವುಗಳನ್ನೆತ್ತಿ ನಲ್ಲಿಯ ಕೆಳಗಿಟ್ಟು ಬಂದಳು. ಗಂಡಸರು ಉಪ್ಪಿಟ್ಟು ತಿಂದು ಬಿಟ್ಟಿದ್ದ ಎಂಜಲು ತಟ್ಟೆಗಳನ್ನೆತ್ತಿ ಗೋಮಯ ಹಚ್ಚಿದಳು. ನಡುಮನೆಯಲ್ಲಿ ಕಸ ಬಳಿದು ನಲ್ಲಿಯ ಬಳಿ ಕೂತು ಪಾತ್ರೆ ತಿಕ್ಕಿದಳು. ಅವಳ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ನಚ್ಚಿಲ್ಲದ ಮೊದಲನೆ ಮದುವೆ ಜರುಗದೆ ಹೋಗಿ

ದ್ದರೆ ಈಗ ಅತ್ತೆಮ್ಮ ಅಡಿಗೆ ಮನೆಯಿಂದ ಹೀಗೆ ಹೊರಕ್ಕೆ ದೂಡುತ್ತಿರಲಿಲ್ಲ. ತನ್ನನ್ನು ಶೂದ್ರಳಂತೆ ಭಾವಿಸುತ್ತಿರಲಿಲ್ಲ. ನೆಲೆ ಇಲ್ಲದ ಮೂರು ದಿನದ ಬೆಡಗಿನ ಮದುವೆಯಿಂದ ತನ್ನ ಬಾಳೆಲ್ಲ ಹೇಯವಾಯಿತು, ತುಚ್ಛವಾಯಿತು.

ಲಲಿತೆ ಮುಸುರೆಯ ಕೈಯನ್ನು ತೊಳೆದುಕೊಂಡು ಸೆರಗಿನ ಅಂಚಿನಿಂದ ಕಣ್ಣೊರೆಸಿಕೊಂಡಳು. ತನ್ನಷ್ಟಕ್ಕೆ ತಾನೇ ಸಮಾಧಾನಪಟ್ಟುಕೊಂಡಳು. ಅತ್ತೆಮ್ಮ ಏನು ಮಾಡಾರು ? ಇದು ಅವರ ಸ್ವಂತ ಆಚಾರವಲ್ಲ, ಲೋಕಾಚಾರ. ಲಲಿತೆ ಪ್ರಭುವಿಗೆ ಮೆಚ್ಚುಗೆಯಾದ ಮಡದಿಯಾಗಿರಬಹುದು. ಪ್ರಪಂಚಕ್ಕೆ ಅವಳು ಹೊಸದಾಗಿ ಕುಂಕುಮವಿಟ್ಟ ಹಳೆಯ ವಿಧವೆ ತಾನೇ ? ಸತ್ತ ಹೆಣಕ್ಕೆ ಜೀವ ಬಂದಾಗ ಜನಗಳಿಗೆ ಎಷ್ಟು ಭಯವೂ ಸಂದೇಹವೂ ಉಂಟಾಗುತ್ತೋ, ವಿಧವೆಗೆ ಮದುವೆಯಾದಾಗಲೂ ಜನಗಳಿಗೆ ಅಷ್ಟೇ ಭಯವೂ ಸಂದೇಹವೂ ಉಂಟಾಗುತ್ತೆ. ಮೈಯ ಒಂದೊಂದು ನಾಡಿಯಲ್ಲೂ ತುಂಬಿ ಹರಿಯುತ್ತಿರುವ ಹಳೆಯ ಆಚಾರ ವ್ಯವಹಾರಗಳನ್ನು ಕಿತ್ತೊಗೆಯಬೇಕಾದರೆ ದೇವಸ್ಥಾನವನ್ನು ಕಿತ್ತೊಗೆಯುವಷ್ಟು ಸಂಕಟವಾದ ಕೆಲಸ....

ಲಲಿತೆ ಪಾತ್ರೆಗಳನ್ನು ತಿಕ್ಕಿ ಚೊಕ್ಕಟವಾಗಿ ತೊಳೆದು ನಲ್ಲಿಯ ಕೆಳಗೆ ಒಪ್ಪನಾಗಿ ಇಟ್ಟಳು. ಮನೆಗೆ ಹೋಗಿ ಅಲ್ಲಿ ನೆನೆಸಿಟ್ಟಿದ್ದ ಸೀರೆ ಪಂಚೆಗಳನ್ನೆಲ್ಲ ಒಗೆದಳು. ಆ ಮೇಲೆ ಸ್ನಾನಮಾಡಿ ಮಹಡಿಯ ಮೇಲೆ ತನ್ನ ರೂಮಿಗೆ ಹೋದಳು.

ರಾತ್ರಿ ಗಂಡನಿಗೆ ಎಲೆ ಅಡಿಕೆಯನ್ನು ಮಡಿಸಿಕೊಟ್ಟು ತಾನೂ ಜಗಿದು ಅವನ ಕಾಲೊತ್ತುತ್ತ ಕೂತಳು.

" ಅಹಹ ! ಎಷ್ಟು ಸುಖವಾಗಿದೆ ಕಣೆ ! ಕಾಲಲ್ಲಿ ಇಷ್ಟು ನೋವಿತ್ತು ಅಂತ ಈಗ ತಾನೇ ಗೊತ್ತಾಗುತ್ತೆ. ಹಲ್ಲಿನ ಕೊಳೆ ತೆಗೆಯುವಾಗ ಅಯ್ಯೋ, ನನ್ನ ಹಲ್ಲಲ್ಲಿ ಇಷ್ಟು ಕೊಳೆ ಇತ್ತೆ ಡಾಕ್ಟರೇ ? ಎಂತ ಆಶ್ಚರ್ಯಪಡುತ್ತಾರಲ್ಲ, ಹಾಗೆ "

" ಪಾಪ, ಎಷ್ಟು ತಿರುಗುತ್ತೀರಿ ಬೆಳಗಿನಿಂದ. "

" ಹೌದು, ಇಷ್ಟು ವರ್ಷ ಮನೇಲಿ ಕೂತಿದ್ದೆನೇನೋ ? ರಾಣಿ

ಮನೆಗೆ ಬಂದರೆ ಎಲ್ಲಿಯೂ ಇಲ್ಲದ ನೋವೆಲ್ಲ ಬರುತ್ತೆ, ದುಡ್ಡಿನ ಹಿಂದೆ ದುರಭ್ಯಾಸ ಬರುವ ಹಾಗೆ"

"ಛೆ, ನೀವು ಕೇಳಿದಿರೇನು ಕಾಲೊತ್ತು ಅಂತ. ನನಗೆ ನಿದ್ದೆ ಬರಲಿಲ್ಲ, ಒತ್ತುತ್ತೇನೆ. ಬಗಲಿಗೆ ಮಲಗಿ ಬೆನ್ನು ಹಿಸಕೋಣ. ಹಾಗಲ್ಲ ಅಂದ್ರೆ. ಇದೋ ಹೀಗೆ. ನೋಡಿ, ಭುಜಗಳಲ್ಲಿ ಎಷ್ಟು ನೋವಿದೆ ಅಂತೀರಿ?"

"ನನಗೆ ನೊಂದರೆ ನಿನಗೆ ಹೇಗೇ ಗೊತ್ತಾಗುತ್ತೆ? ನಿಜವಾಗೂ ಭುಜಗಳು ನೋವುತ್ತವೆ ಕಣೆ. ಅಬ್ಬ! ಎಷ್ಟು ಹಾಯಾಗಿವೆ ಅಂತೀ? ನಿನ್ನ ಕಟ್ಟಿಕೊಂಡದ್ದು ಸಾರ್ಥಕವಾಯಿತೂಂತ ಕಾಣುತ್ತೆ. ಅಂದ ಹಾಗೆ ಅಮ್ಮ ನಿನ್ನನ್ನ ಬೈದಳಂತೆ ಹೌದೇನು?"

"ಇಲ್ಲಲ್ಲ ಯಾರು ಹೇಳಿದರು ನಿಮಗೆ?"

"ಅಮ್ಮ ಹೇಳಿದಳು. ನೀನು ಎಸರಿಗಿಡಲೇ ಅಂತ ಕೇಳಿದೆಯಂತೆ. ಅವಳು ಬೇಡಾ ಅಂದಳಂತೆ. ನೀನು ಮುನಿಸಿಕೊಂಡು ಹೊರಟುಹೋದೆಯಂತೆ. ನಾನಿರೋ ತನಕ ದೇವರ ದೀಪ ಹಚ್ಚಿಡೋ ಜಾಗದಲ್ಲಿ ಶುದ್ಧವಾಗಿರಲಿ ಕಣೋ ಅಂದಳು ಅಮ್ಮ. ದೇವರಿಗೆ ತೋರಿಸೋ ಅನ್ನ ಮಡಿಯಾಗಿರಬೇಕಂತೆ. ಅನ್ನ ಮಾಡೋ ಅಡಿಗೆ ಮನೆ ಮಡಿಯಾಗಿರಬೇಕಂತೆ. ನನಗೇಕೋ ಬೇಜಾರಾಗಿದೆ ಲಲಿತ. ಬೇರೆ ಮನೆ ಮಾಡೋಣವೇನು?"

"ಥು, ಎಂಥ ಮಾತು ಹೇಳ್ತೀರಿ ಕಣ್ರಿ? ಬೇರೆ ಮನೆ ನೋಡೋ ಹಾಗೆ ಏನು ಬಂತು ಈಗ? ಅತ್ತೆಮ್ಮ ಹಾಗೇನೂ ನನ್ನ ಬೈಲಿಲ್ಲ. ನಾನು ಮುನಿಸಿಕೊಳ್ಳಲೂ ಇಲ್ಲ. ಅವರವರ ಆಚಾರ, ಭಕ್ತಿ, ಅವರವರಿಗಿರುತ್ತೆ. ಅದನ್ನು ಕೆಡಿಸಿದ ಪಾಪಕ್ಕೆ ನಾವೇಕೆ ಹೋಗಬೇಕು? ಘಂಟೆ ಹನ್ನೊಂದು ಹೊಡೀತು, ಮಲಗಿಕೊಳ್ಳಿ"

ಲಲಿತ ಪ್ರಭುವಿಗೆ ರಗ್ಗು ಹೊದ್ದಿಸಿ ದೀಪವನ್ನಾರಿಸಿ ತಾನೂ ಮಲಗಿದಳು.

"ಹೋಗಲಿ ಬಿಡು. ಒಂದೆರಡು ತಿಂಗಳು ತಾನೇ ಈ ಊರಿನ ಸಹವಾಸ? ಅದುವರೆಗೂ ಹಲ್ಲು ಕಚ್ಚಿಕೊಂಡಿರೋಣ."

" ನಾನೇನೂ ಕಷ್ಟಪಡುತ್ತಿಲ್ಲಾ ಅಂದ್ರೆ. ಹಲ್ಲು ಕಚ್ಚಿಕೊಳ್ಳೋ ಹಾಗೆ ಕಷ್ಟ ಬಂದರೆ ನಾನೇ ಹೇಳ್ತೀನೆ. ದೊಡ್ಡವರನ್ನು ಅನ್ನಬಾರದು ನೋಡಿ. ಅವರು ದೇವರಿಗೆ ಸಮಾನ "

" ಹೌದು ಹೌದು, ಸುಮ್ಮನೆ ಹರಟಬೇಡ, ಮಲಗಿಕೋ. ದೊಡ ವರು ಹುಡುಗರನ್ನು ಮಮತೆಯಿಂದ ನೋಡಿಕೊಂಡರೆ ಹುಡುಗರಿಗೂ ದೊಡ್ಡವರಲ್ಲಿ ಭಕ್ತಿ ಹುಟ್ಟುತ್ತೆ. ದಿನ ದಿನಕ್ಕೂ ಹುಡುಗರನ್ನು ಹೀಗೆ ಅವ ಹೇಳನ ಮಾಡುತ್ತ ಬಂದರೆ .... "

" ಸಾಕು ಸುಮ್ಮನಿರಿ. ನಿಮ್ಮಂಥಾ ಗಂಡಸರೇ ಅತ್ತೆಗೂ ಸೊಸೆಗೂ ಜಗಳ ತಂದಿಡೋರು. ನನ್ನನ್ನು ಅವರೇನೂ ಅವಹೇಳನ ಮಾಡಲಿಲ್ಲ "

" ಬಿಡು, ಆ ಮಾತೇಕೆ ? ನೀನು ಕೆಲಸಕ್ಕೆ ಎಂದು ಸೇರುತ್ತಿ ? "

" ಯಾವ ಕೆಲಸಕ್ಕೆರೀ ? "

" ಬೆಳಿಗ್ಗೆ ಆರ್ಡರ್ ಬಂತಲ್ಲ, ಹೆರಿಗೆ ಆಸ್ಪತ್ರೆಗೆ "

"ನನಗೆ ಕೆಲಸ ಬೇಡಾ ಅಂತ ಜವಾಬು ಬರೆದು ಕಳುಹಿಸಿ ಬಿಟ್ಟೆನಲ್ಲ "

" ಏಕೆ ? "

" ಕೆಲಸಕ್ಕೆ ಸೇರಿ ಯಾರನ್ನು ಉದ್ಧಾರ ಮಾಡಬೇಕಾಗಿದೆ ಹೇಳಿ. ನೀವೊಬ್ಬರು ಸಂಪಾದಿಸುವುದು ಸಾಲದೆ ? ನಾನು ಕೆಲಸಕ್ಕೆ ಸೇರಿಕೊಂಡು ನನ್ನನ್ನು ಹರಿಹರಕ್ಕೂ ನಿಮ್ಮನ್ನು ಬೇತಮಂಗಲಕ್ಕೂ ವರ್ಗಮಾಡಿಬಿಟ್ಟರೆ ಸಂಸಾರ ಬಹಳ ಅಂದವಾಗಿರುತ್ತೆ ನೋಡಿ "

" ಮತ್ತೆ, ನಿಮ್ಮಪ್ಪ ಇಷ್ಟು ಕಷ್ಟಪಟ್ಟು ಓದಿಸಿದರಲ್ಲ ? "

" ನೀವು ಒಲಿದು ಮದುವೆ ಆದಿರಲ್ಲ ? "

" ಆದರೂ ನೀನು ಕೆಲಸಕ್ಕೆ ಒಪ್ಪಿಕೋಬೇಕಾಗಿತ್ತು "

" ಏಕೋ ಕಾಣೆ "

" ನೀನೂ ಸ್ವತಂತ್ರಳಾಗಿ ಸಂಪಾದಿಸಿಕೊಂಡು ಜೋರಾಗಿರಬಹುದಾಗಿತ್ತೋ, ಅತ್ತೆ ಮಾವಂದಿರ ಕಾಟ ಇಲ್ಲದೆ "

" ಸಾಕು ಸುಮ್ಮನಿರಿ. ನನಗೆ ಸ್ವಾತಂತ್ರ್ಯ ದೊರೆತು ಯಾರ ಮನೆ ಉದ್ಧಾರವಾಗಬೇಕು ! ಬೆಳಿಗ್ಗೆ ಬೇಗನೆ ಏಳಬೇಕು ಮಲಗಿಕೊಳ್ಳಿ "

ಆರು ತಿಂಗಳ ನಂತರ ಪ್ರಭುವನ್ನು ಚನ್ನಪಟ್ಟಣದ ಆಸ್ಪತ್ರೆಗೆ ಹಾಕಿದರು. ಅಲ್ಲಿ ಲಲಿತೆ- ಪ್ರಭು, ಇಬ್ಬರದೇ ಸಂಸಾರ. ಸ್ವತಂತ್ರವಾಗಿ ಸಂಸಾರ ನಡೆಸಿದೆನಲ್ಲ ಎಂದು ಲಲಿತೆ ಹೆಮ್ಮೆ ಪಡಲಿಲ್ಲ. ಗಂಡನಿಗೆ ಸರಿಯಾಗಿ ವಿದ್ಯಾವಂತಳಾಗಿದ್ದೇನೆಂದು ಅಹಂಕಾರ ಪಡಲಿಲ್ಲ. ಬೆಳಗ್ಗೆ ಗಂಡ ಏಳುವುದಕ್ಕೆ ಮುಂಚೆಯೇ ಎದ್ದು ಅವನ ಕಾಲುಗಳನ್ನು ಮುಟ್ಟಿ ಕಣ್ಣಿಗೆ ಒತ್ತಿಕೊಂಡು ತನ್ನ ಕೆಲಸಕ್ಕೆ ಹೋಗುವಳು. ಪ್ರಭು ಏಳುವ ವೇಳೆಗೆ ಕಾಫಿಯನ್ನು ತಯಾರು ಮಾಡುವಳು. ಗಂಡನ ಬಟ್ಟೆಗಳನ್ನು ತಾನೇ ಒಗೆಯುವಳು. ಹಾಸಿಗೆಯನ್ನು ತಾನೇ ಹಾಸುವಳು

'' ಲಲ್ಲೂ, ಹಾಳು ಅಗಸರವನು ಷರ್ಟಿನ ಕಾಲರನ್ನು ನೆಟ್ಟಗೆ ಇಸ್ತ್ರಿ ಮಾಡಿಲ್ಲ ಕಣೆ. ಸರಿಯಾಗಿ ನಿಲ್ಲೊಲ್ಲ ನೋಡೆ, '' ಎನ್ನುತ್ತ ಪ್ರಭು ಕನ್ನಡಿಯ ಮುಂದೆ ನಿಂತು ಟೈಯನ್ನೂ ಕಾಲರನ್ನೂ ಸರಿಮಾಡಿಕೊಳ್ಳುತ್ತಿದ್ದ.

'' ಹೌದು ಹೌದು, ಕುಣಿಯಲಾರದ ಸೂಳೆ ಅದೇನೋ ಮಾಡಿದಳಂತಲ್ಲ '' ಎನ್ನುತ್ತ ಲಲಿತ ಟೀ ತಂದು ಮೇಜದ ಮೇಲಿಟ್ಟಳು. ಟೈ ಗಂಟನ್ನು ನೆಟ್ಟಗೆ ನಿಲ್ಲಿಸಿ ಕಾಲರನ್ನು ಸುಕ್ಕಿಲ್ಲದಂತೆ ಸರಿಪಡಿಸಿದಳು. ಪ್ರಭು ಟೀ ಕುಡಿಯುವ ವೇಳೆಗೆ ಅವನ ಅಂಗಿಯನ್ನು ತೆಗೆದು ಬ್ರಷ್ ಮಾಡಿ ತೊಡಿಸಿದಳು.

'' ನಿನ್ನ ಕೈ ಸೋಕಿದಾಕ್ಷಣ ಉಡುಪಿಗೆ ಕಳೆ ಬರುತ್ತೆ ಕಣೆ. ನಿಮಗೆ ಟೈ ಗಂಟು ಬಹಳ ಚೆನ್ನಾಗಿ ನಿಲ್ಲುತ್ತೆ ಡಾಕ್ಟರ್ ಅಂತ ಕ್ಲಬ್ಬಿನಲ್ಲಿ ಬಹಳ ಮಂದಿ ಅಸೂಯೆಪಡ್ತಾರೆ. ಗಂಡಸರಿಗೆಲ್ಲ ನಿನ್ನಂಥ ನಾಣ್ಯದ ಹೆಂಡತಿ ದೊರಕಿದರೆ ಬೇರೆ ಸ್ವರ್ಗಕ್ಕೆ ಹೋಗಬೇಕಾಗೇ ಇಲ್ಲ ನೋಡು. ಹ್ಯಾಟು ತೆಕೋ........ಅದು ಬೇಡವೇ. ಹಸುರು ಹ್ಯಾಟು ತೆಕೊ. ಹಾಗೇ .... ಎಲ್ಲಿ, ಕೈಕೊಡು ಸ್ವಲ್ಪ ........ ನೋಡು ನೋಡು. ಹೊರಟುಬಿಟ್ಟೆಯಲ್ಲ ಆಗಲೇನೇ. ಒಂದು ಮಾತು ಹೇಳ್ತೀನೆ ಹತ್ತಿರ ಬಾ ಮತ್ತೆ. ''

'' ಹೋಗಿ, ಈ ಚಕ್ಕಂದವೆಲ್ಲ ರಾತ್ರಿಗೆ. ಆಸ್ಪತ್ರೆಗೆ ಹೊತ್ತಾಯ್ತು ನೋಡಿ ''

೦ ೦ ೦

ಲಲಿತೆ ಪ್ರಭುವನ್ನು ಮೈ ತುಂಬ ಪ್ರೀತಿಸುತ್ತಿದ್ದಳು. ತೆಳುವಾಗಿದ್ದ ಅವನ ಮೈ ದಿನ ದಿನಕ್ಕೆ ಉಬ್ಬಿತು. ಅವನ ಕೀರ್ತಿ ಬೆಳಗಿತು. ಅಂತಸ್ತು

ಏರಿತು. ಬೆಂಗಳೂರು, ಕೋಲಾರ, ಹಾಸನ, ತರೀಕೆರೆ, ಕೆಂಗೇರಿ, ಶಿವಮೊಗ್ಗ ಇತ್ಯಾದಿ ಸಂಸ್ಥಾನದ ಒಂಭತ್ತು ಜಿಲ್ಲೆಗಳನ್ನು ನವಗ್ರಹಗಳಂತೆ ಸುತ್ತಿಹಾಕಿ ಕಡೆಗೆ ತುಮಕೂರಿಗೆ ಜಿಲ್ಲಾ ಮೆಡಿಕಲ್ ಆಫೀಸರಾಗಿ ಬಂದ. ಅವನ ದೊಡ್ಡಸ್ತಿಕೆಯನ್ನು ಗೌರವಿಸಿ ಜಿಲ್ಲಾ ಸ್ಕೌಟು ಕಮಿಷನರಾಗಿ ನೇಮಿಸಿದರು.

ಲಲಿತೆ ಪತಿಯನ್ನು ದೇವರಂತೆ ಪೂಜಿಸುತ್ತಿದ್ದಳು. ದಿನ ಬೆಳಗಾದರೆ ಸ್ನಾನಮಾಡಿ ದೇವರಿಗೆ ದೀಪವನ್ನು ಹೊತ್ತಿಸಿ ಮೂರು ಪಂಗ್ತಿ ರಾಮನಾಮವನ್ನು ಬರೆದು ಕೈಮುಗಿದು ಏಳುತ್ತಿದ್ದಳು. ಅವಳದು ಒಂದೇ ಒಂದು ಪ್ರಾರ್ಥನೆ. "ದೇವರೆ, ಅವರನ್ನು ಸದಾ ನೆಮ್ಮದಿಯಾಗಿಟ್ಟಿರಪ್ಪ" ಮನೆಯಲ್ಲಿ ಮಕ್ಕಳು ತುಂಬಬೇಕು, ಬ್ಯಾಂಕು ಲೆಕ್ಕದಲ್ಲಿ ದುಡ್ಡು ತುಂಬಬೇಕು, ಇತ್ಯಾದಿ ಪ್ರಾರ್ಥನೆಗಳು ಅವಳ ಮನಸ್ಸಿಗೆ ಬರುವುದೇ ಇಲ್ಲ. ಪ್ರಭು ಒಬ್ಬ ನೆಮ್ಮದಿಯಾಗಿದ್ದರೆ ಸಾಕು. ಅವನೊಬ್ಬನಿದ್ದರೆ ಅವಳಿಗೆ ಎಲ್ಲ ಇದ್ದಂತೆ. ಅವನೇ ಅವಳ ಜೀವ, ಅವಳ ಸರ್ವಸ್ವ.

ಆದರೆ ಪ್ರಭು ಲಲಿತೆಯಲ್ಲಿ ಅಂಥ ಅಭಿಮಾನವಿಡಲಿಲ್ಲ. ಅವನು ಮಹತ್ವಾಕಾಂಕ್ಷಿ. ಅಂತಸ್ತು ಏರಿದಂತೆಲ್ಲ ಇನ್ನೂ ಮೇಲೆ ಮೇಲೆ ಹತ್ತಬೇಕೆಂದು ಆಸೆ. ಮೇಲಿಂದ ಮೇಲೆ ಪ್ರಮೋಷನ್ ಸಿಕ್ಕಿದ್ದರೂ ಇನ್ನೂ ಬೇಗನೆ ಸಿಗಲಿಲ್ಲವಲ್ಲ ಎಂದು ಆತುರ. ಕೆಲಸಕ್ಕೆ ಸೇರಿದ ಐದಾರು ವರ್ಷಗಳಲ್ಲಿ ಎರಡನೆ ದರ್ಜೆ ಅಸಿಸ್ಟೆಂಟು ಸರ್ಜನಾಗಿ ಬಂದಿದ್ದ. ತನಗಿಂತ ಮೇಲಿದ್ದ ಎಷ್ಟೋ ಮಂದಿಯನ್ನು ಮೆಟ್ಟಿ ಬಂದಿದ್ದ. ಇನ್ನೂ ಸಾಲದು. ಬೇಗ ಬೇಗ ಮೇಲೆ ಏರಬೇಕು. ಮೊದಲ ದರ್ಜೆಯ ಅಸಿಸ್ಟೆಂಟ್ ಸರ್ಜನಾಗಬೇಕು ; ಸೀನಿಯರ್ ಸರ್ಜನ್ ಆಗಬೇಕು. ಸ್ವಿಚ್ ಒತ್ತಿದ ಕೂಡಲೆ ಈ ದೀಪ ಆ ದೀಪ, ಇನ್ನೊಂದು ದೀಪ, ಮನೆಯ ದೀಪಗಳೆಲ್ಲ ಲಗುಬಗೆಯಿಂದ ಹತ್ತಿಕೊಳ್ಳುವಂತೆ ಅವನಿಗೆ ಪ್ರಮೋಷನ್ ಲಗುಬಗೆಯಿಂದ ಬಂದು ಬಿಡಬೇಕು.

ಇದು ಅವನ ಆಕಾಂಕ್ಷೆ. ಅವನ ಆಕಾಂಕ್ಷೆಯನ್ನು ನೆರವೇರಿಸಿಕೊಳ್ಳಲು ರೋಹಿಣಿಯ ಸಹವಾಸ ದೊರೆಯಿತು. ಅದು ಲಲಿತೆಗೆ ದ್ರೋಹಕರವಾದ ಸಹವಾಸ. ಮಹತ್ವಾಕಾಂಕ್ಷೆ ಉಳ್ಳವರಿಗೆ ದ್ರೋಹಾದ್ರೋಹಗೆ

ಳನ್ನು ಪರ್ಯಾಲೋಚಿಸಲು ತಾಳ್ಮೆಯಿರುವುದಿಲ್ಲ. ಧರ್ಮವೋ ಅಧರ್ಮ ವೋ ತಮ್ಮ ಕೆಲಸ ಸಾಧಿಸಿದ್ದೊಂದು ಮುಖ್ಯ.

ಆಗ ಪ್ರಭು ಬೆಂಗಳೂರಲ್ಲಿ ಡಾಕ್ಟರಾಗಿದ್ದ. ರೋಹಿಣಿಯ ಮೈ ಪರೀಕ್ಷಿಸಲು ಅವಳ ಮನೆಗೆ ಹೋಗಬೇಕಾಯಿತು. ರೋಹಿಣಿ ಸಂಸ್ಥಾನದ ಭಾರಿ ಅಧಿಕಾರಿಗಳ ಮೂರನೆಯ ಕುಟುಂಬ. ಇಪ್ಪತ್ತು ವಯಸ್ಸು. ಆ ದಿನ ರೋಹಿಣಿಗೆ ವಿಪರೀತ ಜ್ವರ ಬಂದಿತ್ತು. ಮನೆಯಲ್ಲಿದ್ದವರೆಲ್ಲ ಅವಳ ಆಸೆಯನ್ನು ಬಿಟ್ಟು ಸುತ್ತ ನೆರೆದಿದ್ದರು. ಪ್ರಭು ರಾತ್ರಿ ಹಗಲು ಅವಳ ಬಳಿ ಕೂತು ಇಂಜಕ್ಷನ್ ಕೊಟ್ಟ. ಔಷಧಿ ಕುಡಿಸಿದ. ಎರಡು ದಿನಕ್ಕೆ ಹುಡುಗಿಗೆ ಹೋಗಿದ್ದ ಜೀವ ಹಿಂತಿರುಗಿ ಬಂತು.

ರೋಹಿಣಿ ಸಂಪೂರ್ಣವಾಗಿ ಗುಣಹೊಂದುವ ತನಕ ಪ್ರಭು ಅವರ ಮನೆಗೆ ದಿನಕ್ಕೆರಡು ಬಾರಿ ಬಂದು ಹೋಗುತ್ತಿದ್ದ. ಆ ಮೇಲೂ ಬಂದು ಹೋಗುತ್ತಿದ್ದ. ಅವಳನ್ನು ಇಲ್ಲಿಂದಲ್ಲಿಗೆ ನಡೆಸಿಕೊಂಡು ಹೋಗಬೇಕು, ಉದ್ಯಾನವನಕ್ಕೆ ಕರೆದುಕೊಂಡು ಹೋಗಬೇಕು, ಉಲ್ಲಾಸವಾದ ಮಾತುಗಳನ್ನಾಡಿಸಿ ಅವಳನ್ನು ಸದಾ ಸಂತೋಷವಾಗಿಟ್ಟರಬೇಕು. ಇವಕ್ಕೆಲ್ಲ ಅವರ ಮನೆಯಲ್ಲಿ ಬೇರೆ ನೆಂಟರಿಷ್ಟರಿರಲಿಲ್ಲ.

ಉದ್ಯಾನವನದಲ್ಲಿ ಮಾತನಾಡುತ್ತ ಕೂತಿದ್ದಾಗೆಲ್ಲ ರೋಹಿಣಿಯ ಕಣ್ಣು ಅವನನ್ನು ಸೆಳೆಯುತ್ತಿತು. ಮುಖ ಮೋಹಿಸುತ್ತಿತ್ತು. ಮೈ ಕೋಮಲವಾಗಿತ್ತು.

ರೋಹಿಣಿ ಒಲಿದಳು. ಪ್ರಭು ನಲಿದ. ನಂದೀ ಬೆಟ್ಟ, ಜೋಗು ಜಲಪಾತ, ಬೃಂದಾವನ, ಕೆಮ್ಮಣ್ಣು ಗುಂಡಿ – ಈ ಸ್ಥಳಗಳಲ್ಲಿ ಅವರು ಸ್ವೇಚ್ಛೆಯಾಗಿ ಕುಣಿದಾಡಿದರು. ಆಗ ಪ್ರಭು ಇನ್ನೂ ಸಬ್ ಅಸಿಸ್ಟೆಂಟ್ ಸರ್ಜನಾಗಿದ್ದ. ರೋಹಿಣಿಯ ಪ್ರಯತ್ನದಿಂದ ಅಸಿಸ್ಟೆಂಟ್ ಸರ್ಜನಾಗಿ ಪ್ರಮೋಷನ್ ಸಿಕ್ಕಿತು. ಕೋಲಾರಕ್ಕೆ ವರ್ಗಮಾಡಿದರು.

"ನೀವೇನಪ್ಪ ಈಗ ದೊಡ್ಡ ಮನುಷ್ಯರಾಗಿ ಬಿಟ್ಟರಿ. ಇನ್ನು ನಮ್ಮನ್ನೆಲ್ಲ ಕಡೆಗಾಣುತ್ತೀರಿ ತಾನೇ?" ಎಂದು ಕೊಂಕಿನ ದನಿಯಲ್ಲಿ ಕೇಳಿದಳು ರೋಹಿಣಿ.

“ ರೋಹಿಣಿ, ಹೀಗೆಲ್ಲ ಗೇಲಿ ಮಾಡಿದರೆ ನಾನು ಸುಮ್ಮನಿರೋಲ್ಲ ನೋಡು. ಎಲ್ಲಿ ಹೀಗೆ ಬಾ ” ಎನ್ನುತ್ತ ಅವಳನ್ನು ಹಿಡಿದುಕೊಂಡು ಜೇಬಿನಲ್ಲಿಟ್ಟುಕೊಂಡಿದ್ದ ವಜ್ರದ ಬೆಂಡೋಲೆಗಳನ್ನು ಎರಡು ಕಿವಿಗಳಿಗೂ ಹಾಕಿದ. ರೋಹಿಣಿ ಹತ್ತಿರದಲ್ಲಿದ್ದ ನಿಲುವುಗನ್ನಡಿಯಲ್ಲಿ ನೋಡಿಕೊಂಡು, “ ಹ್ಹಾ ! ವಜ್ರದ ಬೆಂಡೋಲೆ ! ” ಎನ್ನುತ್ತ ಊರಿನಷ್ಟಗಲ ನಕ್ಕಳು.

“ ಹೌದು ವಜ್ರದ ಬೆಂಡೋಲೆ – ಬಡವನ ಬಳುವಳಿ. ”

ಪ್ರಭು ರೋಹಿಣಿಗೆ ಕೊಟ್ಟ ಬಳುವಳಿ ವಜ್ರದ ಬೆಂಡೋಲೆಯೊಂದಿಗೇ ನಿಂತು ಹೋಗಲಿಲ್ಲ. ಒಳ್ಳೊಳ್ಳೆಯ ಸೀರೆಗಳು, ಭಾರಿ ಕೈ ಗಡಿಯಾರ, ಅರೆಳೆ ಚೈನು, ಕಾರಾಮಣಿ ಸರ, ಶಂಖಿನ ಸರ, ವಜ್ರದ ಹರಳುಗಳನ್ನು ಹೊಂದಿಸಿಟ್ಟ ಬಳೆಗಳು – ಹೀಗೆ ಮೇಲಿಂದ ಮೇಲೆ ಅವಳ ಮೈ ತುಂಬಿಸಿದ. ಎಷ್ಟು ಮಳೆ ಬಿದ್ದರೂ ಸಮುದ್ರವು ಪ್ರೀತಿಯಿಂದ ಸ್ವೀಕರಿಸು ವಂತೆ ರೋಹಿಣಿ ಅವುಗಳನ್ನು ಅಕ್ಕರೆಯಿಂದ ಸ್ವೀಕರಿಸಿದಳು. ಪ್ರಭುವಿಗೆ ಬರುತ್ತಿದ್ದ ಸಂಬಳವೂ ಸಂಪಾದನೆಯೂ ವ್ಯಯವಾಗಿ ಅಲ್ಲಿ ಇಲ್ಲಿ ಸಾಲವಾ ಯಿತು. ಅವನಿಗದು ಲಕ್ಷ್ಯಕ್ಕೆ ಬರಲಿಲ್ಲ. ಇಂದಿಲ್ಲ ನಾಳೆ ಸಂಬಳ ಇನ್ನೂ ಹೆಚ್ಚಾಗುತ್ತೆ. ಸಂಪಾದನೆ ಹೆಚ್ಚಾಗುತ್ತ, ಈ ಸಾಲವನ್ನೆಲ್ಲ ತೀರಿಸಿಬಿಡಬಹುದು ಎಂದುಕೊಂಡ. ಸಂಪಾದನೆ ಹೆಚ್ಚಿದಷ್ಟೂ ಖರ್ಚೂ ಹೆಚ್ಚಾಯಿತು. ಅವನು ಕೋಲಾರದಲ್ಲಿರಲಿ, ಶಿವಮೊಗ್ಗೆಯಲ್ಲಿರಲಿ, ತಿಂಗ ಳಿಗೊಮ್ಮೆ ಬೆಂಗಳೂರಿಗೆ ಹೋಗಿ ಬರಬೇಕು. ರೋಹಿಣಿಗೆ ಏನಾದ ರೊಂದು ಉಡುಗೊರೆಯನ್ನು ತೆಗೆದುಕೊಂಡು ಹೋಗಬೇಕು. ಯಾವುದೂ ಸಿಗಲಿಲ್ಲವೆಂದರೆ ನಲವತ್ತು ರೂಪಾಯಿನಲ್ಲಿ ಒಂದು ಸೀರೆಯನ್ನಾದರೂ ತೆಗೆದುಕೊಂಡು ಹೋಗಬೇಕು.

ಪ್ರಭು ಲಲಿತೆಯನ್ನು ಅಸಡ್ಡೆ ಮಾಡಲಿಲ್ಲ. ಅವಳಿಗೂ ಮೈತುಂಬ ಒಡವೆ ಮಾಡಿಸಿದ್ದ. ತಾನೂ ಅವಳೂ ಓಡಾಡಲು ಚಿಕ್ಕ ಕಾರನ್ನು ಕೊಂಡುಕೊಂಡಿದ್ದ–ಅದು ರೋಹಿಣಿ ಮೆಚ್ಚಿ ಶಿಫಾರಸು ಮಾಡಿದ ಆಷ್ಲರು ಕಾರು.

ತುಮಕೂರಿಗೆ ಬಂದಾಗ ಬ್ಯಾಂಕಿನ ಸಾಲ ಅಟ್ಟಕ್ಕೇರಿತ್ತು. ಬ್ಯಾಂಕಿ ನಿಂದ ಮೆಲ್ಲ ಮೆಲ್ಲನೆ ಜ್ಞಾಪಕ ಪತ್ರಗಳು ಬಂದುವು. ರೋಹಿಣಿಗೆ ಕೊಟ್ಟ

ಕೊಟ್ಟು ಸಾಕಾಗಿತ್ತು. "ಇನ್ನು ಮೇಲೆ ಅವಳ ಸಹವಾಸ ಸಾಕು. ಅವಳ ಬಳಿ ಹೋದರೆ ಖರ್ಚು ಹೆಚ್ಚೇ ವಿನಾ ಉಳಿತಾಯವಿಲ್ಲ. ಸಾಲ ತೀರುವ ವರೆಗಾದರೂ ಹೋಗದಿರುವುದೇ ಒಳ್ಳೆಯದು" ಎಂದು ತೀರ್ಮಾನಿಸಿದ. ಎರಡು ತಿಂಗಳು ಬೆಂಗಳೂರ ಕಡೆ ತಲೆಯಿಟ್ಟು ಸಹ ಮಲಗಲಿಲ್ಲ. ರೋಹಿಣಿಯಿಂದ ಕಾಗದ ಬಂತು. ಒಂದು, ಎರಡೂ ಅವಕ್ಕೆ ಜವಾಬು ಹಾಕಲಿಲ್ಲ. ಮೂರನೆಯ ಬಾರಿ ಅವಳು ಬರೆದಳು "ನಿಮ್ಮನ್ನು ಎದುರು ನೋಡಿ ನೋಡಿ ಕಣ್ಣು ಗುಳಿ ಬಿದ್ದುಹೋಯಿತು. ಈ ಕಾಗದಕ್ಕೂ ನೀವು ಬರದಿದ್ದರೆ ನಾನೇ ತುಮಕೂರಿಗೆ ಬಂದುಬಿಡುತ್ತೇನೆ. ಸೋಮವಾರದ ತನಕ ನಿಮ್ಮ ನಿರೀಕ್ಷಣೆ"

ಪ್ರಭುವಿಗೆ ಮನಸ್ಸು ಕರಗಿತು. ಇಷ್ಟು ದಿನ ಬೆಳೆಸಿಟ್ಟ ಗೆಳೆತನ ಒಂದೇ ಸಲಕ್ಕೆ ಬಿಡಬಾರದು. ಹೋಗಿ ಬರೋಣ - ಒಂದು ಸಲ ಹೋಗಿ ಬರೋಣ ಅನ್ನಿಸಿತು. ಈ ಸಲ ಉಡುಗೊರೆ ಏನನ್ನೂ ತೆಗೆದುಕೊಂಡು ಹೋಗಲಿಲ್ಲ. ಉಡುಗೊರೆ ತೆಗೆದುಕೊಂಡು ಹೋಗದಿದ್ದರೆ ಅವಳು ಹೀಗೆ ಬರಮಾಡುತ್ತಾಳೋ ಎಂಬ ರೀತಿಯಲ್ಲಿ ಹೋದ.

"ಅಯ್ಯೋ, ನೀವು ಏನನ್ನೂ ತಂದು ಕೊಡಲಿಲ್ಲಾಂತ ನಾನು ಕರುಬುತ್ತೇನೆಯೇ ಹೇಳಿ." ಎಂದು ಗೋಗರೆದಳು ರೋಹಿಣಿ. "ನೀವೇ ನನಗೆ ದೊಡ್ಡ ಉಡುಗೊರೆ. ನೀವು ಇಷ್ಟು ದಿನ ಬಾರದ್ದಕ್ಕೆ ನನ್ನ ಮನಸ್ಸು ಹೇಗೆ ಹಿಂಡಿಬಿಟ್ಟಿತು ಗೊತ್ತೆ? ಇನ್ನು ಮೇಲೆ ಹಾಗೆ ಮಾಡಬೇಡಿ ಪ್ರಭು. ನನಗೆ ಏನಾದರೂ ತಂದು ಕೊಡಬೇಕಲ್ಲ ಅಂತ ಚಿಂತಿಸಬೇಡಿ. ದೇವರು ನನಗೆ ಬೇಕಾದಷ್ಟು ಕೊಟ್ಟಿದಾನೆ. ನಿಮ್ಮ ಮನಸ್ಸು ಮಾತ್ರ ನನಗೆ ಕೊಟ್ಟುಬಿಟ್ಟರೆ ಅದೇ ಕೋಟಿ ಸಂಪತ್ತು."

ಪ್ರಭುವಿಗೆ ರೋಹಿಣಿಯ ಮೇಲಿದ್ದ ರೋಷವೆಲ್ಲ ಇಂಗಿಹೋಯಿತು. ಅವಳನ್ನು ಹಿಡಿದುಕೊಂಡು ಅವಳ ಕಣ್ಣುಗಳನ್ನೇ ದಿಟ್ಟಿಸುತ್ತ ಹೇಳಿದ. "ರೋಹಿಣಿ, ರೋಹಿಣಿ, ನಿನ್ನನ್ನು ಏನು ಮಾಡಬೇಕು ಗೊತ್ತೆ?"

o o o

ಒಂದು ದಿನ ಬ್ಯಾಂಕಿನ ಸಾಲಕ್ಕೆ ಬಲವಾದ ನೋಟೀಸ್ ಬಂದಿತು. ವರ್ಷದ ಕೊನೆಯಾದ್ದರಿಂದ ಲೆಕ್ಕವನ್ನು ಕೂಡಲೆ ಮುಗಿಸಬೇಕೆಂದು

ತಗಾದೆ ಬಂದಿತು. ನಾಲ್ಕು ಸಾವಿರ ರೂಪಾಯಿ ಸಾಲವನ್ನು ಒಂದು ಸಾವಿರಕ್ಕೆ ಇಳಿಸಿದ್ದ. ಬ್ಯಾಂಕಿನವರಿಗೆ ಏನು ದುರ್ಬುದ್ಧಿ ಹುಟ್ಟಿತೋ ಆ ಒಂದು ಸಾವಿರವನ್ನೂ ಕೂಡಲೇ ತೀರಿಸಬೇಕೆಂದು ಹಠ ಹಿಡಿದಿದ್ದರು. ಪ್ರಭು ತನ್ನ ಕಾರನ್ನು ಮಾರಿ ಸಾಲವನ್ನು ತೀರಿಸಬಹುದಾಗಿತ್ತು. ಲಲಿತೆಯ ಕೈ ಬಳೆಗಳನ್ನೋ, ಕೊರಳ ಚೈನನ್ನೋ ತೆಗೆದುಕೊಂಡು ತೊಲಗಿಸಬಹುದಾಗಿತ್ತು. ಹೀಗೆ ಮಾಡಿದರೆ ಲಲಿತೆಗೆ ಗೊತ್ತಾಗುತ್ತೆ. ನಾಲ್ಕು ಜನಕ್ಕೆ ಹರಡುತ್ತೆ, ರೋಹಿಣಿಯೊಂದಿಗೆ ಬೆಳಸುತ್ತಿದ್ದ ಸಹವಾಸ ಬಯಲಿಗೆ ಬೀಳುತ್ತೆ, ಎಂದು ಎಣಿಸಿದ. ನಮ್ಮ ಕೆಟ್ಟ ಚಾಳಿಗಳು ಇಂದಿಲ್ಲದಿದ್ದರೆ, ಇನ್ನೆಂದಾದರೊಂದು ದಿನ ಬಯಲಿಗೆ ಬೀಳುತ್ತೆಂದು ಅವನು ಅರಿಯದೆ ಹೋದ. ಸ್ಟ್ಯಾಟು ಹಣ ಪೋಸ್ಟಾಫೀಸು ಸೇವಿಂಗ್ಸ್ ಬ್ಯಾಂಕಿನಲ್ಲಿತ್ತು. ಅದರ ಲೆಕ್ಕ ಪುಸ್ತಕಗಳು ಅವನ ಬಳಿ ಇದ್ದುವು. ಆ ಹಣದಲ್ಲಿ ಏಳು ನೂರು ರೂಪಾಯಿ ತೆಗೆದ. ತನ್ನ ಸಂಬಳ ಇನ್ನೂರ ಐವತ್ತು ರೂಪಾಯಿ ಬಂತು. ಉಳಿದ ಐವತ್ತು ರೂಪಾಯಿ ಹಾಗೂ ಹೀಗೂ ಸರಿಮಾಡಿ ಒಟ್ಟು ಒಂದು ಸಾವಿರ ರೂಪಾಯಿ ಬ್ಯಾಂಕಿಗೆ ಸಲ್ಲಿಸಿ ಕೈ ತೊಳೆದುಕೊಂಡ.

ಮೂರು ನಾಲ್ಕು ತಿಂಗಳಲ್ಲಿ ಸ್ಟ್ಯಾಟು ಹಣದಿಂದ ಕದ್ದಿದ್ದ ಹಣವನ್ನು ಕಟ್ಟಿಬಿಟ್ಟ. ಆದರೆ ಸ್ಟ್ಯಾಟು ಲೆಕ್ಕಗಳನ್ನು ತನಿಖೆ ಮಾಡಿದಾಗ ಏಳು ನೂರು ರೂಪಾಯಿಗಳನ್ನು ಪ್ರಭು ತನ್ನ ಸ್ವಂತಕ್ಕೆ ನಾಲ್ಕು ತಿಂಗಳು ಕಾಲ ಉಪಯೋಗಿಸಿಕೊಂಡನೆಂದು ಆಡಿಟರು ಮೇಲಿನಧಿಕಾರಿಗಳಿಗೆ ತಿಳಿಸಿದರು. ವಿಷಯ ಗಾಢವಾಯಿತು. ದಿವಾನರ ತನಕ ಮುಟ್ಟಿತು. ಅವರು ದಯಾಳುವಾದ್ದರಿಂದ ಪ್ರಭು ತನ್ನ ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟ ಪಕ್ಷಕ್ಕೆ ಅವನ ಮೇಲೆ ಮುಂದಿನ ನಡೆವಳಿಕೆಗಳನ್ನು ನಿಲ್ಲಿಸಬೇಕೆಂದು ತೀರ್ಮಾನಿಸಿದರು.

ಪ್ರಭುವಿಗೆ ಈ ಅಪಮಾನವನ್ನು ಸಹಿಸಲಾಗಲಿಲ್ಲ. ಲಲಿತೆ ಇದು ತಿಳಿದರೆ ಏನೆಂದಾಳು ? ತಾಯಿ, ತಂದೆ, ಅತ್ತೆ–ಮಾವ, ಇವರಿಗೆಲ್ಲ ತಿಳಿದರೆ ಏನೆಂದಾರು ? ಊರಲ್ಲಿ ಜನಗಳ ಮುಂದೆ ತಲೆ ಎತ್ತುವುದು ತಾನೇ ಹೇಗೆ ! ಎಂಬೀ ವಿವಿಧ ಪ್ರಶ್ನೆಗಳು ಅವನ ಮನಸ್ಸಿನಲ್ಲಿ ಮೊನೆ ಮೊನೆಯಾಗಿ ಚುಚ್ಚಿದುವು. ಸರಿ, ಇದನ್ನೆಲ್ಲ ಕೊನೆಗಾಣಿಸಲು ಒಂದೇ

ಮಾರ್ಗ – ಒಂದೇ ಒಂದು ಮಾರ್ಗ ಎಂದು ನಿಶ್ಚಯಿಸಿದ. ಆಗಲೇ ಲಲಿತೆಗೆ ವಿಶದವಾಗಿ ಕಾಗದವನ್ನು ಬರೆದಿಟ್ಟ. ರೋಹಿಣಿಯೊಂದಿಗೆ ಸಹವಾಸ ಬೆಳೆದುದು, ಆಕೆಗೆ ಒಡವೆ ವಸ್ತುಗಳನ್ನು ತೆಗೆದುಕೊಟ್ಟುದು, ಬ್ಯಾಂಕಿನಲ್ಲಿ ಸಾಲವಾದುದು – ಇವನ್ನೆಲ್ಲ ಚಾಚೂ ತಪ್ಪದೆ, ಮುಚ್ಚಿಡದೆ ಬರೆದು, ಕವರಿನಲ್ಲಿ ಹಾಕಿ ಅಂಟಿಸಿ ವಿಳಾಸವನ್ನು ಬರೆದಿಟ್ಟ. ಕೆಲಸಕ್ಕೆ ರಾಜೀನಾಮೆಯನ್ನೂ ಬರೆದಿಟ್ಟ. ಆ ಕಡೆ ಮೂಲೆಯಲ್ಲಿಟ್ಟಿದ್ದ ಪಾದರಸದ ಜಾಡಿಯನ್ನು ಎತ್ತಿ ಹಿಡಿದು ಗಟಗಟನೆ ಕುಡಿದು ಹಾಕಿದ. ಖಾಲಿ ಜಾಡಿಯನ್ನು ಮೇಜ ಮೇಲಿಟ್ಟು ಪ್ರಪಂಚವನ್ನು ನಗುತ್ತ ನೋಡುತ್ತಿದ್ದ. ಆ ಮೇಲೆ ಜ್ಞಾನ ತಪ್ಪಿತು. ಕುರ್ಚಿಯಿಂದ ಕೆಳಗುರುಳಿದ.

ಹೊರಗೆ ಕೂತಿದ್ದ ಜವಾನ ಸದ್ದು ಕೇಳಿ ಓಡಿಬಂದ. ಡಾಕ್ಟರು ಬಿದ್ದಿರುವುದನ್ನು ನೋಡಿ ಗಾಬರಿಯಾಯಿತು. ಬಾಯಿಂದ ಹೊಂಬಣ್ಣದ ಹೊಗೆ ಬರುತ್ತಿತ್ತು. ಓಡಿ ಹೋಗಿ ವಾರ್ಡಿನಲ್ಲಿದ್ದ ಡಾಕ್ಟರು ರೇವಣ್ಣನವರಿಗೆ ತಿಳಿಸಿದ. ಕಾಂಪೌಂಡರಿಗೆ ತಿಳಿಸಿದ. ಅಲ್ಲಿಂದ ಪ್ರಭುವಿನ ಮನೆಗೆ ಹೋಗಿ ಆತುರದಿಂದ "ಅಮ್ಮಾ, ಅಮ್ಮಾ," ಎಂದು ಕರೆದ. ಲಲಿತೆ ಆಗ ತಾನೇ ದೇವರ ದೀಪವನ್ನು ಹೊತ್ತಿಸಿಟ್ಟು ರಾಮನಾಮವನ್ನು ಬರೆಯುತ್ತಿದ್ದಳು. ಮೂರು ಪಂಗ್ತಿ ಮುಗಿಸಿಟ್ಟು ಹೊರಗೆ ಬಂದಳು.

"ಏನಪ್ಪ ?"

"ಡಾಕ್ಟರು ವಿಷ ಕುಡಿದುಬಿಟ್ಟರಮ್ಮ, ಕೆಳಗೆ ಬಿದ್ದಿದ್ದಾರೆ"

"ರೇವಣ್ಣೋರು ಇನ್ನೂ ಬಂದಿಲ್ಲೇನೋ ?"

"ಅವರೂ ನೋಡ್ತಿದಾರ್ರಮ್ಮ, ನಿಮಗೆ ತಿಳಿಸೋಣಾಂತ ಬಂದೆ"

"ರಾಮಚಂದ್ರ, ನೀನೇ ಗತಿಯಪ್ಪ !" ಎಂದು ಉಸಿರುಗರೆಯುತ್ತ ಲಲಿತೆ ಆಸ್ಪತ್ರೆಗೆ ಓಡಿಬಂದಳು. ಆ ವೇಳೆಗೆ ಪ್ರಭುವನ್ನು ಆಪರೇಷನ್ ಥಿಯೇಟರಿಗೆ ಸಾಗಿಸಿ ಮೇಜಿನ ಮೇಲೆ ಮಲಗಿಸಿದ್ದರು. ಲಲಿತೆ ನಾಡಿಯನ್ನು ಹಿಡಿದು ನೋಡಿದಳು. ಅದು ನಿಂತು ತಣ್ಣಗಾಗಿತ್ತು. ಎದೆಯನ್ನು ತೆರೆದು ಸ್ಟೆತೋಸ್ಕೋಪನ್ನಿಟ್ಟು ನೋಡಿದಳು. ಎದೆಯ ಬಡಿತವು ನಿಂತುಹೋಗಿತ್ತು. ಮೈಶಾಖವು ಸ್ವಲ್ಪ ಸ್ವಲ್ಪ ಇತ್ತು. ಲಲಿತೆ ಮನಸ್ಸಿನಲ್ಲಿ ಏನೇನೋ ಗುಣಿಸುತ್ತಿದ್ದಳು. ಪಾದರಸವನ್ನು ಸಂಹರಿಸುವ

ಔಷಧವು ಅವಳ ಜ್ಞಾಪಕಕ್ಕೆ ಬರಲಿಲ್ಲ. ಪಾದರಸವನ್ನು ಹೆಚ್ಚಾಗಿ ಕುಡಿ ದವರು ಬದುಕಿ ಬಂದಂತೆ ಅವಳಿಗೆ ನೆನಪಿಲ್ಲ. ನಿನ್ನೆ ತಾನೇ ಇದಕ್ಕೆ ಹೊಸ ಮಿಶ್ರಣವನ್ನು ಅಮೆರಿಕದಲ್ಲಿ ಯಾರೋ ಡಾಕ್ಟರ್ ಕಂಡು ಹಿಡಿದಿದ್ದ ಹಾಗೆ ಪತ್ರಿಕೆಯಲ್ಲಿ ಓದಿದ್ದಳು. ಲಲಿತೆ ಅದನ್ನು ಜ್ಞಾಪಿಸಿಕೊಂಡು ಮನೆಗೆ ಓಡಿದಳು. ಪತ್ರಿಕೆಯನ್ನು ತೆಗೆದುಕೊಂಡು ಬಂದಳು. ರೇವಣ್ಣನವರಿಗೆ ಅದನ್ನು ತೋರಿಸಿ ಇಂಜೆಕ್ಷನ್ ಸೂಜಿಗಳನ್ನು ಹೊಂದಿಸಿಟ್ಟುಕೊಳ್ಳುವಂತೆ ಹೇಳಿ ಔಷಧಗಳಿದ್ದ ಮೇಜಿಗೆ ನೆಗೆದು ಹೋದಳು. ಚಟುವಟಿಕೆಯಿಂದ ಔಷಧಿಯನ್ನು ಕಲಸಿ ತಂದಳು. ರೇವಣ್ಣನವರು ಸಿದ್ಧವಾಗಿಟ್ಟಿದ್ದ ಇಂ ಜೆಕ್ಷನ್ ಸೂಜಿಯಿಂದ ಔಷಧವನ್ನು ಹೀರಿ ಪ್ರಭುವಿನ ಗಂಟಲು, ಹೊಟ್ಟೆ ಕರುಳುಗಳಲ್ಲಿ ಆಳವಾಗಿ ತೂರಿದಳು.

ಅದು ಹೊಸ ಔಷಧ. ಹೊಸ ತೆರನಾದ ಇಂಜೆಕ್ಷನ್. ಲಲಿತೆಗೆ ಅದ ರಲ್ಲಿ ಸಂಪೂರ್ಣವಾದ ಭರವಸೆಯಿರಲಿಲ್ಲ. ಇಂಜೆಕ್ಷನ್ ಕೊಟ್ಟು ಐದು ನಿಮಿಷವಾಯ್ತು. ಹತ್ತು ನಿಮಿಷವಾಯ್ತು, ಪ್ರಭುವಿಗೆ ಜ್ಞಾನ ತಿರುಗಲಿಲ್ಲ. ಆಗ ಲಲಿತೆ ಅಲ್ಲಿ ನೆರೆದಿದ್ದ ಕಾಂಪೌಂಡರು, ಹೆಣ್ಣು ಡಾಕ್ಟರು, ನರ್ಸು ಗಳು, ರೇವಣ್ಣನವರು ಎಲ್ಲರನ್ನೂ ಹೊರಕ್ಕೆ ಅಟ್ಟಿಬಿಟ್ಟಳು. ಬಾಗಿಲು ಹಾಕಿ ಗಂಡನ ಬಳಿ ತಾನೊಬ್ಬಳೇ ಕೂತಳು. ಅವನನ್ನು ತೊಡೆಯ ಮೇಲಿಟ್ಟುಕೊಂಡು ಅವನ ಮುಖವನ್ನೇ ನೋಡುತ್ತ ಕೂತಳು. ಮನ ಸ್ಸಿನಲ್ಲಿ ರಾಮನಾಮವನ್ನು ಜಪಿಸಿದಳು. ಕೈ ಗಡಿಯಾರದಲ್ಲಿ ಐದು ನಿಮಿಷವಾಯ್ತು, ಹತ್ತು ನಿಮಿಷವಾಯ್ತು, ಅವನಿಗೆ ಪ್ರಜ್ಞೆ ಬರಲಿಲ್ಲ. ಇಪ್ಪತ್ತು ನಿಮಿಷ ಕಾಯುವುದು. ಅದರ ಮೇಲೆಯೂ ಅವನಿಗೆ ಜ್ಞಾನ ಬರದಿದ್ದರೆ ಅವನು ಸಂಪೂರ್ಣವಾಗಿ ಸತ್ತುಹೋಗಿ ಬಿಡುವ. ಅವನು ಹೋದ ಮೇಲೆ ತಾನು ಬದುಕಿದ್ದು ತಾನೇ ಏನು ಪ್ರಯೋಜನ? ಯಾರಿಗೆ ಸುಖ? ತಾನೂ ವಿಷ ಕುಡಿದು ಸಾಯುವುದೇ ಲೇಸು.

ಹದಿನೈದು ನಿಮಿಷವಾಯ್ತು, ಹದಿನೆಂಟು, ಹತ್ತೊಂಭತ್ತು, ಇಪ್ಪತ್ತು ನಿಮಿಷಗಳೂ ಮುಗಿದುವು. ಶವ ಅಲುಗಾಡಲಿಲ್ಲ. ನಾಡಿ ಓಡಲಿಲ್ಲ. ಮೈ ತಣ್ಣಗೆ ಕೊರೆಯುತ್ತಿತ್ತು. ಲಲಿತೆ, "ರಾಮಚಂದ್ರ! ಸರಿ, ನಿನ್ನ

ಸಂಕಲ್ಪದಂತೆ ನಡೆಯಲಿ" ಎಂದು ನಿಟ್ಟುಸಿರುಬಿಡುತ್ತ ಪ್ರಭುವಿನ ಶಲೆಯನ್ನು ತೊಡೆಯಿಂದ ಇರಿಸಿ, ಮೇಜಿನಿಂದ ಕೆಳಗಿಳಿದು ಔಷಧಿಗಳಿದ್ದ ಮೇಜಿನ ಬಳಿ ಹೋದಳು. ಗಡುಸಾದ ವಿಷದ ಸೀಸೆಯನ್ನೆತ್ತಿ ಅದರಲ್ಲಿ ವಿಷವೇ ಇದೆಯೆಂದು ಮುಂದಟ್ಟು ಮಾಡಿಕೊಳ್ಳಲು ಸೀಸೆಯ ಮೇಲೆ ಅಂಟಿಸಿದ್ದ ಚೀಟಿಯನ್ನು ಓದಿಕೊಂಡಳು, ಬಿರುಟೆಯನ್ನು ತೆಗೆದು ಬಾಯ ಹತ್ತಿರ ಹಿಡಿದಳು "ಇರು ಒಂದು ಸಲ ಅವರ ಮುಖ ನೋಡಿ ಬರುತ್ತೇನೆ. ಒಂದೇ ಒಂದು ಸಲ ಅವರ ಕಾಲುಗಳನ್ನು ಕಣ್ಣಿಗೆ ಒತ್ತಿಕೊಳ್ಳುತ್ತೇನೆ. ಈ ಜನ್ಮದಲ್ಲಂತೂ ನನ್ನನ್ನು ತ್ಯಜಿಸಿ ಹೋದಗು. ಮುಂದಣ ಜನ್ಮದಲ್ಲಾದರೂ ನನಗೆ ಶಾಶ್ವತವಾಗಿ ದೊರೆಯಲಿ" ಎನ್ನುತ್ತ ಸೀಸೆಯನ್ನು ಅಲ್ಲಿಯೇ ಇಟ್ಟು ಗಂಡನ ಬಳಿ ಸಾರಿದಳು. ಮುಖವನ್ನು ಎರಡು ಕೈಗಳಿಂದಲೂ ನೇವರಿಸಿದಳು. ಅವನ ತೆರದ ತುಟಿಗಳಿಗೆ ಕಣ್ಣುಗಳನ್ನು ಕೊಟ್ಟಳು. ಕಾಲುಗಳೆರಡನ್ನೂ ಕಣ್ಣಿಗೆ ಒತ್ತಿಕೊಂಡಳು.

ಆ ಮೇಲೆ ಔಷಧದ ಮೇಜಿಗೆ ಪುನಃ ಹೋಗಿ ವಿಷದ ಸೀಸೆಯನ್ನು ತೆಗೆದುಕೊಂಡಳು. ನಿಶ್ಚಲವಾಗಿ ಮಲಗಿದ್ದ ಪ್ರಭುವನ್ನೇ ನೋಡುತ್ತ ಸೀಸೆಯನ್ನು ಬಾಯಿಗೆತ್ತಿ ಹಿಡಿದಳು. ಗಟಗಟನೆ ಕುಡಿದು ಹಾಕಿದಳು.



*

# ◆ ಪ್ರಾಣದೇವರು ◆

ಕೃಷ್ಣಮೂರ್ತಿಗೆ ದೇವನಹಳ್ಳಿ ಸೊಸೈಟಿಯಲ್ಲಿ ಚಾಕರಿ. ಸಂಬಳ ಏಳು ರೂಪಾಯಿ. ಈ ಸಂಬಳವೇ ಜೀವನಕ್ಕೆ ಆಧಾರ. ಬೇರೆ ಮನೆ-ಮಠ, ಭೂಮಿ-ಕಾಣಿ, ನಸ್ಮರಂತಿ. ಅವನಿಗೆ ಬಹು ಕಾಲ ಮದುವೆ ಆಗಲಿಲ್ಲ. ಒಂದು ದಿನ ಊರಿನವರೆಲ್ಲ ಮರುಕಪಟ್ಟು, ಚಂದಾ ಹಾಕಿ, ಪದ್ಮಳನ್ನು ಹುಡುಕಿ ತಂದು ಗಂಟು ಹಾಕಿದ್ದರು. ಪದ್ಮಳ ತಂದೆ ಬಾಲ್ಯದಲ್ಲೇ ತೀರಿಹೋಗಿದ್ದರು. ತಾಯಿ ಜಾತಿ ಕೆಟ್ಟು ಅಲ್ಲೆಲ್ಲೋ ಹೊಟ್ಟೆ ಹೊರೆಯುತ್ತಿದ್ದಳು. ಆದ್ದರಿಂದ ಮದುವೆಯಾದನಂತರ ಪದ್ಮ ಗಂಡನ ಮನೆಯಲ್ಲೇ ಬೆಳೆದಳು. ಒಪ್ಪವಾಗಿ ಮನೆಗೆಲಸ ಮಾಡಿಕೊಂಡು ಸುಖವಾಗಿದ್ದಳು. ಒಂದೆರಡು ವರ್ಷ ಕಳೆಯಿತು. ಯುದ್ಧದ ನಿಮಿತ್ತ ಪದಾರ್ಥಗಳ ಬೆಲೆ ಏರಿತು. ತಿಂಗಳು ತಿಂಗಳಿಗೂ ಖರ್ಚು ಜಾಸ್ತಿ ಆಗುತ್ತ ಬಂತು. ಅದಕ್ಕೆ ಸರಿಯಾಗಿ ಸಂಬಳ ಜಾಸ್ತಿ ಆಗವೊಲ್ಲದು. ಅಂಗಡಿಯ ಲೆಕ್ಕ ಗಾಳೀ ಪಟದಂತೆ ಮೇಲಕ್ಕೇರಿತು. ಒಂದು ದಿನ ಅಂಗಡಿಯವನು ಹಳೆಯ ಬಾಕಿ ತೀರಿಸಿದ ಹೊರತು ಸಾಮಾನು ಕೊಡಲಾಗದೆಂದು ಗದ್ದರಿಸಿ ಕಳುಹಿಸಿಬಿಟ್ಟ. ಕೃಷ್ಣಮೂರ್ತಿಗೆ ದುಃಖ ಉಕ್ಕಿ ಬಂತು. ಕೋಪವೂ ಜಾಸ್ತಿಯಾಯಿತು. ಅಂಗಡಿಯವನು ತನ್ನನ್ನು ನಡುಬೀದಿಯಲ್ಲಿ ಅವಮಾನ ಪಡಿಸಿದ್ದ. ಅಂಗಡಿಯಿಂದ ಹೊರಕ್ಕೆ ದೂಡಿದ್ದ. ಇದಕ್ಕೆಲ್ಲ ಕಾರಣ ಪದ್ಮ. ಅವಳನ್ನು ಕಟ್ಟಿಕೊಂಡಿದ್ದಕ್ಕಲ್ಲವೇ ಇಷ್ಟು ಖರ್ಚು, ಇಷ್ಟು ಸಾಲ ? ಅವಳಿಲ್ಲದಿದ್ದರೆ ಇದೆಲ್ಲ ಏಕೆ ಬರುತ್ತಿತ್ತು ?

ಈ ಕೋಪದಲ್ಲಿಯೇ ಅವನು ಮನೆಗೆ ಬಂದ. ಹೆಂಡತಿಯನ್ನು ಕಂಡ ಕಂಡಂತೆ ಬೈದ. ಅವಳೂ ಒಂದೆರಡು ಮಾತು ಅಂದಳು.

ಕೃಷ್ಣಮೂರ್ತಿಗೆ ರೇಗಿತು. ಮೂಲೆಯಲ್ಲಿದ್ದ ಕೋಲಿನಿಂದ ಒಂದೇಟು ಬಿಗಿಯಬೇಕೆಂದು ಮೂಲೆಯ ಕಡೆ ನೋಡಿದ. ಅವನ ದೃಷ್ಟಿ ಅಲ್ಲಿ ಒರಗಿಸಿದ್ದ ಛತ್ರಿಯ ಮೇಲೆ ತಟಕ್ಕನೆ ನಿಂತಿತು. ಆತುರಗಾರನಿಗೆ ಬುದ್ಧಿ ಮಟ್ಟು. ಛತ್ರಿ ಅವನದಲ್ಲ. ಅವನೇ ಅದನ್ನು ಹಿಂದಿನ ರಾತ್ರಿ ಸೊಸೈಟಿಯಿಂದ ತಂದಿಟ್ಟನೆಂಬುದನ್ನು ಮರೆತು ಬಿಟ್ಟಿದ್ದ. ಮನೆಗೆ

ಯಾರೋ ಬಂದು ಛತ್ರಿಯನ್ನು ಮರೆತುಹೋಗಿರಬೇಕೆಂದು ಸಂಶಯಪಟ್ಟ. ಅಂದರೆ ತಾನಿಲ್ಲದ ವೇಳೆ ನೋಡಿ, ಬಂದು ಹೋಗಿರಬೇಕು. ಪದ್ಮಳೊಡನೆ ಮಾತಾಡಿಕೊಂಡು ಹೋಗಿರಬೇಕು. ಹ್ಞ, ಪದ್ಮಳೊಡನೆ ಮಾತಾಡಿಕೊಂಡು ಹೋಗಿರಬೇಕು!

ಹೀಗೆ ನೆನೆಯುತ್ತ ಕೃಷ್ಣಮೂರ್ತಿ ಕಟಕಟ ಹಲ್ಲು ಕಡಿದ. ಪದ್ಮಳನ್ನು ಹಿಡಿದು ಹೊರಕ್ಕೆ ದೂಡಿದ. ಅವಳು ಕಾಲು ಕಾಲಿಗೆ ಬಿದ್ದು ಬೇಡಿಕೊಂಡಳು. ಏನೂ ಅರಿಯದವಳೆಂದು ಅತ್ತಳು. ನಿರಪರಾಧಿಯೆಂದು ಸೆರೆಗೊಡ್ಡಿ ಬೇಡಿಕೊಂಡಳು. ಕೃಷ್ಣಮೂರ್ತಿ ಈ ರೋದನವೊಂದಕ್ಕೂ ಕಿವಿಗೊಡಲಿಲ್ಲ. ಬಾಗಿಲಿಗೆ ಬೀಗ ಹಾಕಿ ಅವಳನ್ನು, "ತೊಲಗು ನಿನ್ನ ತಾಯಿ ಹೋದತ್ತ ತೊಲಗಿ ಹೋಗು" ಎಂದು ಮೂದಲಿಸುತ್ತ ದೇವನಹಳ್ಳಿಯಿಂದ ಬೆಂಗಳೂರಿಗೆ ಹೋಗುವ ಬಸ್ಸಿನಲ್ಲಿ ಕೂರಿಸಿ ಕಳುಹಿಸಿಬಿಟ್ಟ.

೦ ೦ ೦

ಪದ್ಮಳ ಮನಸ್ಸು ಶೂನ್ಯವಾಗಿತ್ತು. ಬದುಕು ಬೆಂಗಾಡಾಗಿತ್ತು. ಬಸ್ಸಿನಿಂದಿಳಿದ ಮೇಲೆ ಕಾಲುಗಳು ಹೇಗೋ ಪ್ರಾಣದೇವರ ಗುಡಿಗೆ ಎಳೆದುಕೊಂಡು ಹೋದವು. ಮನಸ್ಸು ಹೇಗೋ ಪ್ರಾಣದೇವರಲ್ಲಿ ನೆಲೆಗೊಂಡಿತು. ಅರ್ಚಕರು ಕೊಟ್ಟ ಹೂವನ್ನು ತಲೆಯಲ್ಲಿ ಮುಡಿದುಕೊಂಡು, ಕುಂಕುಮವನ್ನು ಹಣೆಯಲ್ಲಿಟ್ಟುಕೊಂಡು, ಹೊರಗೆ ಹೋಗುತ್ತಿದ್ದ ಜನರ ಗುಂಪಲ್ಲಿ ತಾನೂ ಹೊರಗೆ ಬಂದಳು. ಅಷ್ಟು ದೂರ ಹೋದಳು. ಎಲ್ಲಿಗೆ ಹೋಗುವುದೋ ಗೊತ್ತಿಲ್ಲ. ಆಗ ಸಂಜೆ ಏಳು ಘಂಟೆ. ಹಿಂದಿನಿಂದ ಯಾರೋ ಬರುತ್ತಿರುವ ಚಪ್ಪಲಿಯ ಸಪ್ಪಳ 'ಲಪ್ ಲಪ್' ಎಂದು ಕೇಳಿಸಿತು. ಪದ್ಮ ಪಕ್ಕಕ್ಕೆ ನಿಂತು ಸೆರಗು ಸರಿಮಾಡಿಕೊಂಡು ತಲೆ ತಿರುಗಿಸಿ ನೋಡಿದಳು. ಚಪ್ಪಲಿ ಮೆಟ್ಟುತ್ತ ಬಂದವರು ಇವಳನ್ನು ನೋಡಿ ನಗುತ್ತ ಮುಂದೆ ಹೋದರು. ಪದ್ಮ ನಡುಗಿದಳು. ಅವನೇಕೆ ಹಾಗೆ ನಗುತ್ತ ಹೋಗುತ್ತಾನೆ? ತನ್ನ ಮುಖ ಅಷ್ಟು ವಿಕಾರವಾಗಿದೆಯೇ? ಸೀರೆ ಸರಿಯಾಗಿ ಉಟ್ಟುಕೊಂಡಿಲ್ಲವೋ....?

ಪದ್ಮ ಇನ್ನೂ ಸ್ವಲ್ಪ ಮುಂದೆ ಹೋದಳು. ಕೆದರಿದ ಕೂದಲನ್ನು ಕೈಯಿಂದ ನೇರಮಾಡಿಕೊಂಡು ಮುಂದೆ ಮುಂದೆ ಹೋದಳು. ಬೆಂಗ

ಊರು ಹೊಸದು, ದೊಡ್ಡದು. ಹಗಲಾದರೂ ಆಗಿದ್ದರೆ ಅಲ್ಲಿ ಇಲ್ಲಿ ತಿರುಗಿ ಛತ್ರವನ್ನು ಹುಡುಕಿ ತಂಗಬಹುದು. ರಾತ್ರಿ ಹೊತ್ತು ಯಾರನ್ನು ಕೇಳೋಣ? ಏನೆಂದು ಕೇಳೋಣ? – ಇದೇಕೆ ಈ ಹುಡುಗರೆಲ್ಲ ಹೀಗೆ ನೋಡುತ್ತಾರಲ್ಲ, ನಗುತ್ತಾರಲ್ಲ .... !

ಪದ್ಮ ಧೈರ್ಯ ತಂದುಕೊಂಡು ಒಬ್ಬರನ್ನು ಕೇಳಿದಳು. "ಅಪ್ಪ, ಇಲ್ಲೆಲ್ಲಾದರೂ ಛತ್ರವಿದೆಯೆ?"

ಹುಡುಗರ ಗುಂಪೆಲ್ಲ ಗಹಗಹಿಸಿ ನಕ್ಕಿತು.

ಪದ್ಮಳಿಗೆ ಜಗತ್ತೇ ಕುಸಿದು ಬಿದ್ದಂತಾಯ್ತು. ಅಲ್ಲಿಂದ ಬೇಗ ಬೇಗ ಹೊರಟು ಹೋದಳು. ಹುಡುಗರ ಗುಂಪಿಂದೊಂದು ದಯಾಳುವಾದ ಧ್ವನಿ – "ಲ್ರೋ, ಆಕೆಗೆ ತುಲಸೀತೋಟದ ಛತ್ರವಾದರೂ ತೋರಿಸಿರೋ"

ಪದ್ಮ ಅಲ್ಲಿ ಇಲ್ಲಿ ಪೃಚ್ಛಿಸಿಕೊಂಡು ತುಲಸೀತೋಟದ ಛತ್ರವನ್ನು ಸೇರಿ ಜಗುಲಿಯ ಮೇಲೆ ಕುಳಿತಳು. ನೊಂದ ಕಾಲಿಗೆ ವಿಶ್ರಾಂತಿ ಸಿಕ್ಕಿತು. ಬೆಂದ ಮನಸ್ಸಿಗೆ ತೃಪ್ತಿ. ರಾತ್ರಿ ಮಲಗಲಿಕ್ಕೊಂದು ಜಾಗ ಸಿಕ್ಕಿತಲ್ಲ. ಬೆಳಗಿನವರೆಗೂ ಮಲಗಿರಬಹುದು. ಬೆಳಗಾದ ಮೇಲೆ ನೋಡೋಣ, ಪ್ರಾಣದೇವರಿದ್ದಾನೆ. ಯಾರು ಕೈಬಿಟ್ಟರೂ ದೇವರು ಕೈಬಿಡೋಲ್ಲವಲ್ಲ! ಯಾರ ಮನೆಯಲ್ಲಾದರೂ ಹುದುಗಿಕೊಂಡು ಕಸ ಮುಸುರೆ ಮಾಡಿಕೊಟ್ಟರೆ ಜೀವನ ತಾನಾಗಿ ನಡೆದುಹೋಗುತ್ತೆ. ಜೀವನ ನಡೆಸಲು ಕಷ್ಟ ತೋರಿ ತಾನೇ ಗಂಡ ತನ್ನನ್ನು ಹೊರಗೆ ದೂಡಿದ್ದ!

ಪದ್ಮ ಮರುದಿನ ಕೋಳಿ ಕೂಗುವ ಹೊತ್ತಿಗೇ ಎದ್ದು ಕೊಳಾಯಿಯಲ್ಲಿ ಕುಂಕುಮವಳಿಸಿದಂತೆ ಮುಖಾ ತೊಳೆದುಕೊಂಡಳು. ಜಡೆಯನ್ನು ಬಿಚ್ಚಿ ಕೊಡವಿ ಮತ್ತೆ ಹೆಣೆದುಕೊಂಡಳು. ಮುಸುಕು ಮುಸುಕಾಗಿ ಬೆಳಕು ಹರಿಯಿತು. ಎಲ್ಲಿ ಹೋಗುವುದೋ ಬಗೆ ಹರಿಯಲಿಲ್ಲ. ರಾತ್ರಿ ಮಲಗಿದ್ದ ಜಾಗದಲ್ಲೇ ಮತ್ತೆ ಬಂದು ಕೂತಳು. ಸ್ವಲ್ಪ ಹೊತ್ತಾದ ಮೇಲೆ ಹಾಗೆಯೇ ಎದ್ದು ಹೊರಗೆ ಹೋದಳು. ಯಾರ ಮನೆಗೆ ಹೋಗುವುದು? ಏನೆಂತ ಕೇಳುವುದು? ಇಂಥ ಉತ್ತರವಿಲ್ಲದ ಪ್ರಶ್ನೆಗಳನ್ನೇ ಮತ್ತೆ ಮತ್ತೆ ನೆನೆಯುವಳು. ಎಲ್ಲಿಗಾದರೂ ಹೋಗೋಣ, ಯಾರನ್ನಾದರೂ

ಕೇಳೋಣ. ನಮ್ಮ ಕತ್ತನ್ನು ಯಾರೂ ಹಿಸಕೊಲ್ಲವಲ್ಲ! ಎಂಬುದೊಂದೇ ಧೈರ್ಯ. ಹಾಗೆ ಧೈರ್ಯ ಮಾಡಿಕೊಂಡು ಒಂದು ಮನೆಯ ಬಳಿ ನಿಂತಳು. ಭಯದಿಂದ ಒಳಗಡೆ ನೋಡಿದಳು. ಮನೆಯಾಕೆ ಕನ್ನಡಿಯನ್ನು ಕೈಯಲ್ಲಿ ಹಿಡಿದುಕೊಂಡು ಕುಂಕುಮವನ್ನಿಟ್ಟುಕೊಳ್ಳುತ್ತಿದ್ದಳು. ಪದ್ಮ ಉಗುಳು ನುಂಗುತ್ತ ಸೆರಗು ಸರಿಮಾಡಿಕೊಂಡು ಮೆಲ್ಲನೆ ಬಾಗಿಲ ಬಳಿ ನಿಂತಳು.

" ಯಾರಮ್ಮ " ಮನೆಯಾಕೆ ಕೇಳಿದಳು.

ಪದ್ಮ ಏನು ಹೇಳಬೇಕೆಂದು ತೋರದೆ ನಮ್ರಳಾಗಿ ನಿಂತುಕೊಂಡಳು.

" ಏನಮ್ಮ ಬೇಕು ? " ಆಕೆ ಇನ್ನೂ ಹತ್ತಿರ ಬಂದು ಕೇಳಿದಳು.

" ನನಗೆ ಯಾರೂ ದಿಕ್ಕಿಲ್ಲ, ಕಸ ಮುಸುರೆ ಮಾಡಿ ಹೊಟ್ಟೆ ಹೊರೆಯಬೇಕು. ನಿಮ್ಮನೇಲಿ ಕೆಲಸವೇನಾದರೂ ಇದ್ದರೆ .... "

" ನೀವು ಯಾವ ಜನ ? "

" ಅಡ್ಡ ಗಂಧದೋರಮ್ಮ. ನಮ್ಮದು ದೇವನಹಳ್ಳಿ, ಪ್ರಾರಬ್ಧ ಕರ್ಮ ಇಲ್ಲಿಗೆಳೆದುಕೊಂಡು ಬಂದಿತು "

" ತಾಯಿ ತಂದೆ ಒಬ್ಬರೂ ಇಲ್ಲವೆ ನಿಂಗೆ ! "

" ಯಾರನ್ನೂ ಹೇಳಿಕೊಳ್ಳೋ ಹಾಗಿಲ್ಲ "

" ಮದುವೆಯಾದರೂ ಆಯಿತೋ ಇಲ್ಲವೊ ? "

ಈ ಪ್ರಶ್ನೆ ಪದ್ಮಳ ಕಿವಿಗೆ ಸಿಡಿಲು ಬಿದ್ದಂತೆ ಬಿದ್ದಿತು. ಏನೆಂತ ಉತ್ತರ ಹೇಳಲು ತೋರಲಿಲ್ಲ. ಕಣ್ಣಲ್ಲಿ ನೀರು ಉಕ್ಕಿ ಬಂತು. ಸೆರಗಿನಿಂದ ಅದನ್ನೊರಸುತ್ತ ಒಂದು ಕ್ಷಣ ನಿಂತಳು.

ಮನೆಯಾಕೆ ಲಲಿತೆಗೆ ಇವಳನ್ನು ನೋಡಿ ಮರುಕ ಬಂದಿತು. ಎಲ್ಲೋ ದಿಕ್ಕಿಲ್ಲದ ಹುಡುಗಿಯಾಗಿರಬೇಕೆಂದುಕೊಂಡಳು. " ಬಾಮ್ಮ ಒಳಗೆ ಬಾ "

ಪದ್ಮ ಮೌನವಾಗಿ ಹೆಜ್ಜೆಯಿಟ್ಟುಕೊಂಡು ನಡುವೆಯಲ್ಲಿ ಗೋಡೆಗೊರಗಿ ನಿಂತಳು.

" ನೋಡು, ನಮ್ಮನೇಲಿ ಮೂರನೆಯವರು ಬಂದು ಚಾಕರಿ ಮಾಡುವಷ್ಟು ಕೆಲಸವಿಲ್ಲ. ಇರುವುದು ನಾನು, ನಮ್ಮ ಮನೆಯವರು. ಬೆಳಗ್ಗೆ

ಒಂದಷ್ಟು ಮನೆಯ ಮುಂದೆ ಸಾರಿಸಿ ಕಸ ಮುಸುರೆ ಮಾಡಿಕೊಟ್ಟರೆ ಬೆಳಗಿನ ಕೆಲಸ ತೀರಿತು. ಸಂಜೆ ಉಪಕರಣೆಗಳನ್ನು ತೊಳೆದು, ಕಸ ಬಳಿದು ಹಾಸಿಗೆ ಹರವಿಬಿಟ್ಟರೆ ಸಂಜೆ ಕೆಲಸ ಮುಗಿಯಿತು. ಮಧ್ಯಾಹ್ನ ಒಂದೆರಡು ಬಟ್ಟೆಗಳನ್ನು ಒಗೆದು ಹಾಕಬೇಕು. ಇದೆಲ್ಲ ಈಗ ನಾನೇ ನೋಡಿಕೋತಿದೇನೆ. ನಾನು ನಾಲ್ಕು ತಿಂಗಳಿಂದ ನೀರೆರೆದುಕೊಳ್ಳಲಿಲ್ಲ. ದಿನಗಳಾಗುತ್ತ ಆಗುತ್ತ ಆಯಾಸ ಜಾಸ್ತಿಯಾಗುತ್ತೆ. ನಮ್ಮ ಮನೆಯವರು ಸಹಾಯಕ್ಕೆ ಯಾರನ್ನಾದರೂ ಕರೆ ಕಳುಹಿಸೋಣವೆಂದರು ಇನ್ನೂ ಈಗ ಬೇಡ.ವೆಂದು ಹೇಳುತ್ತಿದೇನೆ. ನಿನಗೆ ಪಾಪ, ದಿಕ್ಕಿಲ್ಲವೆಂದು ಹೇಳುತ್ತೀ. ಅವರು ಬಂದ ಮೇಲೆ ಒಂದು ಮಾತು ಕೇಳುತ್ತೇನೆ. ಅವರು ಒಪ್ಪಿದರೆ, ಮನೆಯಲ್ಲಿದ್ದುಕೊಂಡಿರು. ನಾವು ಅಯ್ಯಂಗಾರ್ ಜನ. ಆದರೂ ಬಾಧಕವಿಲ್ಲ. ನಿಮ್ಮ ಸ್ವಂತ ಮನೆಯೆಂದುಕೊಂಡು ಓಡಾಡಿಕೊಂಡಿರು. ಊಟ ಉಡಿಗ್ಗೆ ಎಲ್ಲಾ ಕೊಡುತ್ತೇವೆ. ಅವರು ಬಂದ ನಂತರ ಕೇಳಿ ಕೈ ಖರ್ಚಿಗೆ ಏನಾದರೂ ಕೊಡುವಂತೆ ಹೇಳುತ್ತೇನೆ. ”

ಪದ್ಮಳಿಗೆ ಇದಕ್ಕಿಂತ ಹೆಚ್ಚು ಬೇಕಾಗಿರಲಿಲ್ಲ. ಇಷ್ಟರವುಟ್ಟಿಗೆ ಅಲಸಿಕೆಯಿಲ್ಲದೆ ಆಶ್ರಯ ದೊರೆಯಿತಲ್ಲ! ಹಸಿವು ತೀರಲು ಇಷ್ಟು ಅನ್ನ, ಮಾನ ಮುಚ್ಚಲು ಇಷ್ಟು ಬಟ್ಟೆ ಇದಕ್ಕೆ ಮೇಲೆ ಜೀವನಕ್ಕೇನು ಬೇಕು? ಮೇಲು ಖರ್ಚಿಗೆ ಕೊಟ್ಟರೆ ಕೊಡಲಿ ಬಿಟ್ಟರೆ ಬಿಡಲಿ. ಪ್ರಾಣದೇವರ ಮುಂದೆ ಒಡೆಯಲು ವಾರಕ್ಕೊಂದು ತೆಂಗಿನಕಾಯಿ ಅವಳ ಮೇಲ್ಖರ್ಚು. ತಿಂಗಳಿಗೆ ನಾಲ್ಕು. ದೇವರಿಗೆ ಬೇಕೆಂದು ಕೇಳಿದರೆ ತೆಂಗಿನ ಕಾಯನ್ನು ಯಾರಾದರೂ ತೆಗೆದುಕೊಡುತ್ತಾರೆ .....

ಲಲಿತೆ ಬೀದಿಯ ಕಡೆ ನೋಡಿ ಮೇಲಕ್ಕೆದ್ದಳು. ಪದ್ಮಳೂ ಎದ್ದು ಸೆರಗು ಸರಿಮಾಡಿಕೊಂಡು ನಿಂತಳು. ಲಲಿತೆಯ ಗಂಡ ನಾಗರಾಜ ಒಳಕ್ಕೆ ಬಂದು, ಪದ್ಮಳನ್ನು ಒಮ್ಮೆ ನೋಡಿ ನೇರವಾಗಿ ರೂಮಿಗೆ ಹೋದ. ಲಲಿತೆ ಆತನ ಹಿಂದೆಯೇ ಹೋದಳು. “ ನೋಡೀ ಅಂದ್ರೆ .... ”

ಪದ್ಮ ಮನೆಯಿಂದ ಹೊರಕ್ಕೆ ಬಂದು ಬೀದಿಯ ಅಂಗಳದಲ್ಲಿ ನಿಂತುಕೊಂಡಳು. ಗಂಡ ಹೆಂಡಿರು ಮಾತಾಡುವುದನ್ನು ಹೊಂಚಿ ಕೇಳುವುದು ಅವಳಿಗೆ ಸರಿದೋರಲಿಲ್ಲ.

"ಏಕಮ್ಮ ಹೊರಗೆ ನಿಂತೆ? ಒಳಗೆ ಬಾ. ನಿನ್ನ ಹೆಸರೇನು ಹೇಳಿದೆ? ನೀರಿನ ಮನೆಗೆ ಹೋಗಿ ಮಡಿ ಉಟ್ಟುಕೋ" ಎನ್ನುತ್ತ ಲಲಿತೆ ಅಂಗಳಕ್ಕೆ ಬಂದಳು.

ಂ ಂ ಂ

ಪದ್ಮ ಮನೆಗೆ ಬಂದಾಗ ಲಲಿತೆಗೆ ನಾಲ್ಕು ತಿಂಗಳು ತುಂಬಿತ್ತು. ಸಹಾಯಕ್ಕೆ ಯಾರನ್ನೂ ಕರೆಸಿಕೊಳ್ಳಲಿಲ್ಲ; ಕರೆಸಿಕೊಳ್ಳುವ ಹಾಗೂ ಇರಲಿಲ್ಲ. ಲಲಿತೆಯದು ತಾಯಿಯಿಲ್ಲದ ತವರು. ಅತ್ತಿಗೆ ವಯಸ್ಸು ತೀರ ಮೀರಿ ಹೋಗಿತ್ತು. ನಾದಿನಿಯನ್ನು ಕರೆಸಿದರೆ ಅವಳ ಹಿಂದೆ ಚಿಲ ಪಿಲನೆಂದು ಏಳೆಂಟು ಮರಿಗಳು ಬರುತ್ತವೆ. ಅವರನ್ನೆಲ್ಲ ನಾಲ್ಕೈದು ತಿಂಗಳು ಬೆಂಗಳೂರಲ್ಲಿಟ್ಟುಕೊಂಡರೆ ಅಂಗಡಿಯ ಲೆಕ್ಕ ಕನಿಷ್ಠಪಕ್ಷ ಇನ್ನೂ ರಾದರೂ ಆಗಬಹುದು. ನಾಗರಾಜನಿಗೆ ಸಾಲವಾದರೂ ಆಗಲಿ, ಅಕ್ಕ ನನ್ನು ಕರೆಸಿಕೊಳ್ಳಬೇಕೆಂದು ಇಷ್ಟ. ಲಲಿತೆಗೆ ಅದು ಹಿಡಿಸದು. ಅಡಿ ಗಡಿಗೆ ಗಂಡ ಹೆಂಡರಿಗೆ ಇದೇ ಜಗಳ. ಪದ್ಮ ಬರುವುದಕ್ಕೆ ಹಿಂದಿನ ದಿನ ತಾನೇ ನಾಗರಾಜ ಅಕ್ಕನಿಗೆ ಬರುವ ಹಾಗೆ ಬರೆಯಬೇಕೆಂದು ಕಾರ್ಡು ತಂದು ಜೇಬಿನಲ್ಲಿಟ್ಟಿದ್ದ. ಆತ ಸ್ನಾನಕ್ಕಿಳಿದಾಗ ಲಲಿತ ಅದನ್ನು ಹಾರಿಸಿ ತನ್ನ ತಂದೆಗೆ ಕ್ಷೇಮ ಸಮಾಚಾರವನ್ನು ಬರೆದು ಹಾಕಿಬಿಟ್ಟಿದ್ದಳು. ಇದ ರಿಂದ ಗಂಡ ಹೆಂಡಿರಲ್ಲಿ ಸ್ವಲ್ಪ ಮಾತು ನಡೆಯಿತು. ಪದ್ಮಳನ್ನು ಕಂಡ ಬಳಿಕ ದೇವರೇ ಅವಳನ್ನು ತಮ್ಮ ಮನೆಗೆ ಕಳುಹಿಸಿದನೆಂದುಕೊಂಡಳು ಲಲಿತ.

ಸ್ವಲ್ಪ ದಿನದಲ್ಲೇ ಪದ್ಮ ಮನೆಯಲ್ಲಿ ಹೊಂದಿಕೊಂಡಳು. ಬೆಳಗಿನ ಝಾವ ಎದ್ದೊಡನೆ ನೀರಿನ ಒಲೆಗೆ ಉರಿ ಹಾಕಿ, ಮನೆಯ ಮುಂದೆ ಸೆಗಣಿ ನೀರನ್ನು ಚುಮುಕಿಸಿ, ರಂಗವಲ್ಲಿ ಇಟ್ಟು ಮನೆಯಲ್ಲಿ ಕಸ ಉಡುಗುವಳು. ಅಡಿಗೆ ಮನೆಯ ಒಲೆ ಹೊತ್ತಿಸಿ, ಕಾಫಿಗೆ ನೀರಿಟ್ಟು ಉಪಕರಣಗಳನ್ನೆಲ್ಲ ತೊಳೆದು ಸ್ನಾನಕ್ಕಿಳಿಯುವಳು. ಕಾಫಿ ತಯಾರು ಮಾಡುವ ವೇಳೆಗೆ ಲಲಿತ ಎದ್ದು ಬರುವಳು. ಹತ್ತು ಘಂಟೆಗೆ ಅಡಿಗೆ ಆಗುವುದು. ಲಲಿ ತೆಯೂ ನಾಗರಾಜನೂ ಊಟ ಮಾಡಿದ ಮೇಲೆ ಪದ್ಮ ಊಟಮಾಡುವಳು. ಲಲಿತ ಕಸೂತಿಯನ್ನೋ ಕಾಲು ಚೀಲವನ್ನೋ ಹಾಕುತ್ತ ಕೂತರೆ ಪದ್ಮ

ಬಟ್ಟೆ ಒಗೆಯಲು ಹೋಗುವಳು. ಲಲಿತ ಅನಂತರ ಸ್ವಲ್ಪ ಮಲಗುವಳು. ಪದ್ಮ ಯಾವುದಾದರೂ ಪುಸ್ತಕವನ್ನೋದುತ್ತ ಕೂಡುವಳು. ಸಂಜೆ ಹೊತ್ತು ಕೆಲಸವೆಲ್ಲ ಮುಗಿದ ಬಳಿಕ ಲಲಿತ ವೀಣೆಯನ್ನು ನುಡಿಸತೊಡಗಿದರೆ ಪದ್ಮ ಅವಳ ಹಿಂದೆ ಬಾಗಿಲಿಗೊರಗಿ ನಿಂತು ಕೇಳುತ್ತಿರುವಳು.

ಒಂದು ದಿನ ವೀಣೆಗೆ ಶ್ರುತಿ ಹೊಂದಿಕೊಳ್ಳಲಿಲ್ಲ. ತಂತಿಗಳು ಒಂದಕ್ಕೊಂದು ಜಗಳವಾಡಿದುವು. ಕೀಲಿಗಳನ್ನು ಹೀಗೆ ತಿರುವಿ ಹಾಗೆ ತಿರುವಿ ಲಲಿತೆಗೆ ಸಾಕಾಗಿ ಹೋಯ್ತು. "ಇದಕ್ಕೇನೋ ಒಂದು ದಿನ ಬರುತ್ತಲ್ಲ ತಲೆ ನೋವು!"

"ಸ್ವಲ್ಪ ಇರಿ" ಎನ್ನುತ್ತ ಪದ್ಮ ಪಕ್ಕದಲ್ಲಿ ಬಂದು ಕೂತು ಮೂರನೆಯ ತಂತಿಯ ಕೀಲಿಯನ್ನು ಮೆದುವಾಗಿ ಹಾಗೆ ತಿರುವಿದಳು. ಶ್ರುತಿಯು ಸಮಂಜಸವಾಯ್ತು. ಲಲಿತೆಗೆ ಹಿಡಿಸಲಾರದಷ್ಟು ಆಶ್ಚರ್ಯ. "ನೀನೆಲ್ಲಿ ಕಲಿತೆ ವೀಣೆ ಬಾರಿಸುವುದನ್ನು?" ಎಂದು ಕೇಳಿದಳು.

ಪದ್ಮ ಸ್ಕೂಲಿನಲ್ಲಿ ಓದುತ್ತಿದ್ದಾಗ ವೀಣೆ ಕಲಿತಿದ್ದಳು. ಆಗ ಅವಳಿಗೆ ಪ್ರಶಂಸೆಯೂ ಬಂದಿತ್ತು. ಅದೀಗ ನಾಲ್ಕು ವರ್ಷದ ಮಾತು. ಈಗ ನಾಲ್ಕು ವರ್ಷಗಳಿಂದ ಅಭ್ಯಾಸವು ತಪ್ಪಿಹೋಗಿತ್ತು. ವೀಣೆಯನ್ನು ತೆಗೆದುಕೊಂಡು ಒಂದೆರಡು ಸ್ವರ ಜತೆಗಳನ್ನು ಹುಷಾರಾಗಿ, ನಿಧಾನವಾಗಿ, ನುಡಿಸಿದಳು. ಬೆರಳುಗಳು ಸಡಿಲವಾದುವು, ಸರಾಗವಾಗಿ ತಂತಿಯ ಮೇಲೆ ಹಾಯ್ದುವು. ಮಧುರವಾದ ಸ್ವರಗಳು ಅನಾಯಾಸವಾಗಿ ಹೊರಬಂದವು. ತಂತಿಯ ಮಿಡಿತದಿಂದುಂಟಾದ ಗಾನವನ್ನು ಕೇಳಿ ಅವಳಿಗೇ ಆನಂದವಾಯಿತು. ಒಂದೆರಡು ಕೃತಿಗಳನ್ನು ನುಡಿಸಿದಳು.

ಬೀದಿ ಬಾಗಿಲಿನಲ್ಲಿ ಮೇಜೋಡಿನ ಸಪ್ಪಳವಾಯ್ತು. ನಾಗರಾಜನು ಬಂದ. ಪದ್ಮ ವೀಣೆಯನ್ನು ನಿಲ್ಲಿಸಿ ಕೆಳಗಿಟ್ಟು ಸೆರಗು ಸರಿಮಾಡಿಕೊಳ್ಳುತ್ತ ಮೇಲಕ್ಕೆದ್ದಳು. ನಾಗರಾಜ ಒಳಕ್ಕೆ ಬಂದು ಕೇಳಿದ. "ಏಕಮ್ಮ ನಿಲ್ಲಿಸಿಬಿಟ್ಟೆ? ಹಾಡು, ಹಾಡು."

"ಗಂಡಸರು ಬಂದರೆ ಹೆಂಗಸರು ವೀಣೆಯನ್ನು ಬದಿಗಿಡಬೇಕು ತಾನೇ; ಅದೂ ನಿಮ್ಮಂಥ ಸಂಗೀತ ಪ್ರಿಯರ ಮುಂದೆ?" ಎಂದು ಕೊಂಕಿಸಿ ನುಡಿದಳು ಲಲಿತ.

ನಾಗರಾಜ ರೂಮಿನೊಳಕ್ಕೆ ಹೋಗಿ ಅಂಗಿಯನ್ನು ತೆಗೆದು ಗೂಟಕ್ಕೆ ತಗುಲಿಸಿ ಆರಾಮು ಕುರ್ಚಿಯಲ್ಲಿ ಕೂತು ಮೇಜೋಡು ಕಳಚುತ್ತ ಹೇಳಿದ. "ಹೌದು. ನೀನೂ ಬಾರಿಸುತ್ತೀಯಲ್ಲ – ಹತ್ತಿ ಎಕ್ಕುವವರು ಅಂಬನ್ನು ಮಿಡಿಸಿ ಟೊಯ್ಞ್ ಟೊಯ್ಞ್ ಎನ್ನಿಸುವಂತೆ ! ನಿನ್ನ ಮಧುರವಾದ ಗಾನಕ್ಕೆ ಗಂಡಸರೇ ಏಕೆ, ಕಲ್ಲು ಮರಗಳು ಕೂಡ ಕುಣಿದಾಡಬೇಕು ನೋಡು !"

"ನೀವು ಪದ್ಮ ನುಡಿಸುವುದನ್ನು ಕೇಳಲಿಲ್ಲ"

"ಕೇಳಿದೆ. ಹೊರಗೆ ನಿಂತು ಸ್ವಲ್ಪ ಕೇಳಿದೆ. ಒಳಗೆ ಕೂತು ಇನ್ನಷ್ಟು ಕೇಳೋಣವೆಂದು ಬಂದೆ"

ಲಲಿತ ಪದ್ಮಳನ್ನು ನೋಡಿದಳು. "ಒಂದೆರಡು ಹಾಡು ನುಡಿಸು" ಎಂದಳು.

"ಒಲೆಯ ಮೇಲೆ ಅನ್ನಕ್ಕೆ ನೀರಿಟ್ಟಿದೇನಲ್ಲ, ಅಕ್ಕಿಯನ್ನು ತೊಳೆದು ಹಾಕಿ ಬರುತ್ತೇನೆ" ಎಂದಳು ಪದ್ಮ.

"ಅಡಿಗೆ ನಾ ನೋಡಿಕೋತೇನೆ, ನೀ ಕೂತುಕೋ." ಲಲಿತ ಪದ್ಮಳ ಕೈಹಿಡಿದು ಕೂರಿಸಿದಳು.

o o o

ಒಂದು ಭಾನುವಾರ ಸಂಜೆ. ಲಲಿತೆಯ ಮನೆಯಲ್ಲಿ ನಾಲ್ಕೈದು ಮಂದಿಗೆ ಟೀ – ನಡುಮನೆಯಲ್ಲಿ ಉಪಾಹಾರ. ಪಕ್ಕದ ರೂಮಿನಿಂದ ಕೋಮಲವಾದ ವೀಣಾಗಾನ ಕೇಳಿ ಬರುತ್ತಿತ್ತು. ಶಂಕರಾಭರಣದ ಆಲಾಪನೆಯು ಅಲೆ ಅಲೆಯಾಗಿ ಬರುತ್ತಿತ್ತು. ಬಿಸ್ಕತ್ತಿನ ಚೂರನ್ನೋ ಕಿತ್ತಲೆಯ ತೊಳೆಯನ್ನೋ ಕೈಯಲ್ಲಿಟ್ಟುಕೊಂಡೇ ಎಲ್ಲರೂ ತಲೆದೂಗುತ್ತಿದ್ದರು.

"ಭೇಷ್ ಭೇಷ್"

ರಾಗಾಲಾಪನೆಯು ಮುಗಿದನಂತರ ಅತಿಥಿಗಳಲ್ಲೊಬ್ಬರಾದ ರಾಜಾರಾಯರೆಂದರು. "ನಮ್ಮ ಮಗೂಗೆ ಹೀಗೆ ವೀಣೆ ಕಲಿಸಬೇಕೂಂತ ಎಷ್ಟೋ ದಿನಗಳಿಂದ ನೋಡುತ್ತಿದೇನೆ, ಒಳ್ಳೆಯ ಗುರು ಸಿಗೊಲ್ಲವಲ್ಲ ನಾಗರಾಜ್. ನಿಮ್ಮ ಸಂಸಾರಕ್ಕೆ ಯಾರದು ಪಾಠ ?"

"ಅದು ನಮ್ಮ ಸಂಸಾರವಲ್ಲ ಸಾರ್. ನಮ್ಮ ಮನೆಯಲ್ಲಿರುವ ಇನ್ನೊಂದು ಹುಡುಗಿ"

"ಹಾಗಾದರೆ ಖಂಡಿತ ನೀವು ಈಕೆಯನ್ನು ನಮ್ಮ ಹುಡುಗಿಗೆ ಗೊತ್ತು ಮಾಡಬೇಕು. ತಿಂಗಳಿಗೆ ಹತ್ತೋ ಹದಿನೈದೋ ಕೊಡೋಣ. ನಮ್ಮ ಮನೆಗೆ ಬರಲು ಸಂಕೋಚವಾದರೆ ನಮ್ಮ ಮಗುವನ್ನು ನಿಮ್ಮ ಮನೆಗೇ ಕಳುಹಿಸುತ್ತೇನೆ. ಏನ್ರೀ ನಾಗರಾಜ್?"

"ಆಗಲಿ ಸಾರ್, ಕೇಳಿ ನಾಳೆ ಹೇಳುತ್ತೇನೆ"

o o o

ಹೀಗೆ ಪದ್ಮಳಿಗೆ ಒಂದು ವೀಣೆಯ ಪಾಠ ದೊರೆಯಿತು. ರಾಜಾರಾಯರ ಮನೆಯಲ್ಲಿ ಒಂದೇ ಒಂದು ವೀಣೆ. ಪದ್ಮಳಿಗೆ ಸ್ವಂತ ವೀಣೆಯಿಲ್ಲ. ಈ ಅಸೌಕರ್ಯದಿಂದ ರಾಜಾರಾಯರ ಮಗಳೇ ಲಲಿತೆಯ ಮನೆಗೆ ಮಧ್ಯಾಹ್ನದ ಹೊತ್ತು ವೀಣೆಯನ್ನು ಹೊತ್ತುಕೊಂಡು ಪಾಠಕ್ಕೆ ಬಂದಳು. ಅವಳ ಜತೆಗೆ ಲಲಿತೆಯೂ ವೀಣೆಯನ್ನು ಚೆನ್ನಾಗಿ ಕಲಿಯಬೇಕೆಂದು ಆಸೆ. ಒಂದೆರಡು ದಿನ ಎಡೆಬಿಡದೆ ಕಲಿತಳು. ಆದರೆ ದಿನ ತುಂಬಿದಂತೆಲ್ಲ ಆವಳಿಗೆ ನೇರವಾಗಿ ಹತ್ತು ನಿಮಿಷ ಕೂಡುವುದೂ ಶ್ರಮವಾಯ್ತು. ಈಗ ಪದ್ಮಳಿಗೆ ಕೆಲಸ ಜಾಸ್ತಿ. ಮೊದ ಮೊದಲು ಲಲಿತ ಅಡಿಗೆ ಮಾಡುತ್ತಿದ್ದಳು. ಪದ್ಮ ಸುತ್ತುಗೆಲಸ ನೋಡಿಕೊಳ್ಳುವಳು. ಈಗ ಎಲ್ಲವನ್ನೂ ಇವಳೇ ಮಾಡಿಕೊಳ್ಳಬೇಕು. ಎಲ್ಲ ಕೆಲಸವನ್ನೂ ಪದ್ಮ ಲಲಿತೆಗಾಗಿ ಮಾಡುವಳು. ಮುಖ್ಯವಾಗಿ ಲಲಿತೆಯನ್ನು ಅಲಸಬಾರದು. ಅವಳು ತನ್ನ ಭಾಗ್ಯದೇವತೆ. ದಿಕ್ಕಿಲ್ಲದಿದ್ದಾಗ ತಂಗಲು ನೆರಳು ಕೊಟ್ಟಳು, ಹೊಟ್ಟೆಗೆ ಅನ್ನ ಕೊಟ್ಟಳು. ಜೀವನಕ್ಕೆ ದಾರಿ ತೋರಿಸಿದಳು. ಅವಳನ್ನು ಎಷ್ಟು ಜಾಗರೂಕತೆಯಿಂದ ನೋಡಿಕೊಳ್ಳಬೇಕೋ ಅಷ್ಟು ಜಾಗರೂಕತೆಯಿಂದ ನೋಡಿಕೊಳ್ಳಬೇಕು.

ದಿನ ತುಂಬಿದ ಮೇಲೆ ಲಲಿತೆಯನ್ನು ಆಸ್ಪತ್ರೆಗೆ ಕರೆದುಕೊಂಡು ಹೋದರು. ಡಾಕ್ಟರು ನೋಡಿ ಇನ್ನು ಎರಡು ದಿನಕ್ಕೆ ಪ್ರಸವವಾಗುವುದೆಂದು ಹೇಳಿ ಉಳಿದುಕೊಳ್ಳಲು ಒಂದು ವಾರ್ಡನ್ನು ತೋರಿಸಿದರು. ಪದ್ಮಳೂ ಜೊತೆಯಲ್ಲಿಯೇ ಇರುತ್ತಿದ್ದಳು. ರಾತ್ರಿ ಅಲ್ಲಿಯೇ ಹಾಸಿಗೆ. ಬೆಳಿಗ್ಗೆ ಮನೆಗೆ ಬಂದು ಅಡಿಗೆ ಮಾಡಿ ನಾಗರಾಜನಿಗೆ ಬಡಿಸಿಟ್ಟು ಆತನು

ಆಫೀಸಿಗೆ ಹೋದ ಮೇಲೆ ಕ್ಯಾರಿಯರ್‌ನಲ್ಲಿ ಊಟವನ್ನು ಲಲಿತೆಗೆ ತೆಗೆದು ಕೊಂಡು ಹೋಗುವಳು. ಮಧ್ಯಾಹ್ನ ಮೂರು ಘಂಟೆಗೆ ತಿರುಗಿ ಬಂದು ಮನೆಗೆಲಸಗಳನ್ನು ಮಾಡುತ್ತ ಅಡಿಗೆ ಮಾಡುವಳು. ಏಳು ಘಂಟೆಗೆ ನಾಗರಾಜನಿಗೆ ಬಡಿಸಿ ತಾನುಂಡು, ಲಲಿತೆಗಷ್ಟು ತೆಗೆದುಕೊಂಡು ಹೋಗುವಳು.

ಮೂರನೆಯ ರಾತ್ರಿ ಎರಡು ಘಂಟೆಗೆ ಲಲಿತೆ ಹೆಣ್ಣು ಮಗುವನ್ನು ಪ್ರಸವಿಸಿದಳು.

ಲಲಿತೆಗೆ ಪ್ರಸವವಾದ ಹತ್ತನೇ ಸಂಜೆ. ಪದ್ಮ ಅಡಿಗೆಯನ್ನು ಮುಗಿಸಿ ವೀಣೆಯನ್ನು ಬಾರಿಸುತ್ತ ನಡುಮನೆಯಲ್ಲಿ ಕುಳಿತಿದ್ದಳು. ವೀಣೆಯನ್ನು ಹತ್ತು ದಿನದಿಂದ ಮುಟ್ಟಿರಲಿಲ್ಲ; ರಾಜಾರಾಯರ ಮಗಳಿಗೂ ಹತ್ತು ದಿನ ದಿಂದ ಪಾಠವಿಲ್ಲ. ನಾಳೆಯಿಂದ ಆರಂಭಿಸಬೇಕು. ನಾಳೆಯಿಂದ ಆಸ್ಪತ್ರೆ ಯಲ್ಲಿ ಮಲಗಬೇಕಾಗಿಲ್ಲ. ಲಲಿತೆ ಮಗುವನ್ನೆತ್ತಿಕೊಂಡು ಮನೆಗೆ ಬರು ವಳು. ಮಗುವನ್ನು ಆಡಿಸಿಕೊಂಡು ತಾನೂ ಆಡಿಕೊಂಡಿರಬಹುದು. ಪುಟ್ಟ ಮಗು, ಅಗಲವಾದ ಕಣ್ಣುಗಳು, ದುಂಡು ದುಂಡಾಗಿ ಕೈ - ಕೈ ಕಾಲು. ತೊಟ್ಟಿಲು ತೂಗುತ್ತ ಜೋಗುಳ ಹಾಡಬಹುದು. ಎರಡು ದಿನ ಕಳೆದ ಮೇಲೆ ಎತ್ತಿಕೊಂಡು ಹಾಗೆ ಹೀಗೆ ಓಡಾಡಬಹುದು. ....

ಶ್ರೀರಂಜಿನಿ ರಾಗವು ಮಂದ ಶ್ರುತಿಯಲ್ಲಿ ಮಿಡಿಯುತ್ತಿತ್ತು. ರಮ್ಯ ವಾಗಿತ್ತು ವೀಣೆಯ ತಂತಿ. ವೀಣೆಯೂ ರಮ್ಯವಾಗಿತ್ತು. ಇಂಥ ವೀಣೆ ಯನ್ನು ಕೊಂಡುಕೊಳ್ಳಬೇಕು. ನಾಲ್ಕು ತಿಂಗಳಿಂದ ಲಲಿತೆ ಕೊಟ್ಟ ಸಂಬಳ, ರಾಜಾರಾಯರು ಕೊಟ್ಟ ಸಂಬಳ, ಎಲ್ಲ ಸೇರಿ ಐವತ್ತೈದು ರೂಪಾಯಿ ಸೇರಿತ್ತು. ಎರಡು ತಿಂಗಳು ಕಳೆದರೆ ಎಂಭತ್ತು ರೂಪಾಯಿ ತನಕ ಕೂಡಿಸಿಟ್ಟು ವೀಣೆಯನ್ನು ಕೊಂಡುಕೊಳ್ಳಬೇಕು. ಹೊಸ ವೀಣೆ ಯನ್ನು ಕೇಳಿದರೆ ಅನ್ಯಾಯವಾದ ಬೆಲೆ ಹೇಳುತ್ತಾರೆ. ಅನೇಕ ವೇಳೆ ಹೊಸ ವೀಣೆ ಪಳಗುವುದಿಲ್ಲ. ಪಳಗಿದ ವೀಣೆಯನ್ನು ನೋಡಿ ತೆಗೆದು ಕೊಳ್ಳಬೇಕು .... ಹೀಗೆ ಗಾಳಿ ಗೋಪುರವನ್ನು ಕಟ್ಟುತ್ತ ಪದ್ಮ ಬಲು ಹೊತ್ತು ವೀಣೆಯ ಮೇಲೆ ತನ್ನ ಬೆರಳು ಹಾಯುವುದನ್ನೇ ನೋಡಿಕೊಂಡು ನುಡಿಸುತ್ತಿದ್ದಳು. ಬೀದಿಯ ಕಿಟಕಿಯಿಂದ ನಾಗರಾಜ ಬಲು ಹೊತ್ತು

ತನ್ನನ್ನೇ ನೋಡುತ್ತಿದ್ದುದು ಅವಳಿಗೆ ಅರಿವಿಲ್ಲ. ಅಕಸ್ಮಾತ್ತಾಗಿ ತಲೆಯೆತ್ತಿ ನೋಡಿದಳು. ನಾಗರಾಜ ನಕ್ಕು ಒಳಗೆ ಬಂದ. ಪದ್ಮ ನಾಚಿಕೆಯಿಂದೆದ್ದು ವೀಣೆಯನ್ನು ಬದಿಗಿಟ್ಟು ಅಡಿಗೆ ಮನೆಗೆ ಹೋದಳು.

ಊಟಕ್ಕೆ ಕೂತಾಗ ನಾಗರಾಜ ಹೇಳಿದ. "ಪದ್ಮ, ಇವತ್ತು ಅಡಿಗೆ ಬಹಳ ಚೆನ್ನಾಗಿದೆಯಲ್ಲ! ಲಲಿತ ಎಂದೂ ಹೀಗೆ ಮಾಡಿದ್ದಿಲ್ಲ ನೋಡು. ಸಾರು ಬಹಳ ರುಚಿಯಾಗಿದೆ!"

ಪದ್ಮ ತಲೆ ತಗ್ಗಿಸಿಕೊಂಡು ಮೌನವಾಗಿ ಬಡಿಸುತ್ತಿದ್ದಳು. ನಾಗರಾಜ ತನ್ನನ್ನೇ ನೋಡುತ್ತಿದಾನೆಂದು ಕಡೆಗಣ್ಣಿಂದ ಕಂಡುಕೊಂಡಳು.

"ಇನ್ನು ಮೇಲೆ ನೀನೇ ಅಡಿಗೆ ಮಾಡು ಪದ್ಮ, ಅವಳಿಗೆ ಬರುವುದಿಲ್ಲ"

"ಹ್ಞು"

"ಪದ್ಮ.... ಲಲಿತೆಗೆ ಅನ್ನಕೊಟ್ಟು ಬಿಟ್ಟು ಮಲಗುವುದಕ್ಕೆ ಇಲ್ಲಿಗೇ ಬಂದುಬಿಡು. ಇವತ್ತು ನರ್ಸುಗಳೇ ನೋಡಿಕೋತಾರೆ, ಹೇಳಿ ಬಂದಿದೇನೆ...."

ಪದ್ಮ ಏನು ಬಡಿಸುವಳೋ ಏನಿಲ್ಲವೋ ಅರಿವಿಲ್ಲ. ಜಗತ್ತೆಲ್ಲ ಕೆಳಗು ಮೇಲಾಗಿ, ಅಡ್ಡಾದಿಡ್ಡಾಗಿ, ವಕ್ರವಕ್ರವಾಗಿ, ಸುತ್ತುತ್ತಿತ್ತು.

"ಏನಾಯ್ತು ಪದ್ಮ, ತಲೆ ತಿರುಗುತ್ತೆಯೆ?" ನಾಗರಾಜ ಮೇಲೆದ್ದು ಪದ್ಮಳ ಹತ್ತಿರ ಬಂದ.

"ಇಲ್ಲ ಇಲ್ಲ"

"ಮತ್ತೆ?.... ಇಲ್ಲಿ ಮಲಗಲು ಸಂಕೋಚವೇ ಪದ್ಮ?"

"..........."

"ಹೇಳು ಪದ್ಮ, ಒಂದು ಮಾತು, ಒಂದು ಕ್ಷಣ." ನಾಗರಾಜ ಅವಳ ಕೈ ಹಿಡಿದುಕೊಂಡ.

"ಬಿಡಿ ಬಿಡಿ – ಈಗ ಬಿಟ್ಟುಬಿಡಿ." ಪದ್ಮ ಕೊಡವಿಕೊಂಡು ತನ್ನ ರೂಮಿನಲ್ಲಿ ಕೂತಳು. ಕಣ್ಣಿನಲ್ಲಿ ದಳದಳ ನೀರು ಬಂತು. ಅತ್ತಳು, ಬಿಕ್ಕಿ ಬಿಕ್ಕಿ ಅತ್ತಳು.

ನಾಗರಾಜ ಊಟ ಮುಗಿಸಿ ಕೈ ತೊಳೆದುಕೊಂಡು, ಕ್ಯಾರಿಯರಲ್ಲಿ ಊಟವನ್ನೂ ಫ್ಲಾಸ್ಕಿನಲ್ಲಿ ಬಿಸಿ ನೀರನ್ನೂ ತುಂಬಿಸಿ, ಪದ್ಮ ಕುಳಿತಿದ್ದ ರೂಮಿಗೆ ಹೋದ. ಪದ್ಮ ತಲೆ ಎತ್ತಲಿಲ್ಲ, ಅಳುವನ್ನು ನಿಲ್ಲಿಸಿದಳು.

" ಪದ್ಮ, ಲಲಿತೆಗೆ ಊಟ ತೆಗೆದುಕೊಂಡು ಹೋಗುವುದು ಮರೆತು ಬಿಟ್ಟೆಯಲ್ಲ ! ಕೋ, ಇದರಲ್ಲಿ ತುಂಬಿಸಿಟ್ಟಿದೇನೆ, ತೆಗೆದುಕೊಂಡು ಹೋಗು. ನೀನು ಊಟ ಮಾಡಲಿಲ್ಲವಲ್ಲ ! ಹೋಗಲಿ, ಜಾಗ್ರತೆ ಬಂದು ಬಿಡು, ಊಟ ಮಾಡುವಿಯಂತೆ."

ಪದ್ಮ ಬದಲು ಹೇಳಲಿಲ್ಲ. ಕ್ಯಾರಿಯರನ್ನೂ ಬಿಸಿ ನೀರಿನ ಫ್ಲಾಸ್ಕನ್ನೂ ತೆಗೆದುಕೊಂಡು ಮೌನವಾಗಿ ಹೊರಟಳು. ನಾಗರಾಜ ಇಷ್ಟು ಹೇಯವಾಗಿ ವರ್ತಿಸುವನೆಂದು ಅವಳು ಎಣಿಸಿರಲಿಲ್ಲ. ತನಗೆ ಸುಖವಾಗಿ ವಸತಿ ಸಿಕ್ಕಿತೆಂದು ಅವಳು ಹೆಮ್ಮೆಪಟ್ಟುಕೊಂಡಿದ್ದಳು. ಲಲಿತ ಸುಂದರವಾದ ಗುಣಶಾಲಿ ; ತನ್ನನ್ನು ಒಡಹುಟ್ಟಿದ ತಂಗಿಯಂತೆ ನೋಡಿ ಕೊಳ್ಳುತ್ತಿದ್ದಳು. ಆರು ತಿಂಗಳು ಬದುಕಿನಲ್ಲಿ ಒಂದು ದಿನವಾದರೂ ಅವಳು ಗದ್ದರಿಸಿ ಮಾತಾಡಿದ್ದಿಲ್ಲ. ನಾಗರಾಜನೂ ಅಷ್ಟೆ. ಈವರೆಗೆ ದೊಡ್ಡಸ್ತಿಕೆಯ ಸಭ್ಯತೆಯಿಂದ ಮಿತವಾಗಿ ಮಾತಾಡುತ್ತಿದ್ದ. ಅಂಥ ಗಂಡ ನನ್ನು ಪಡೆದುದು ಲಲಿತೆಯ ಸೌಭಾಗ್ಯವೆಂದುಕೊಂಡಿದ್ದಳು. ಆ ಸೌಭಾಗ್ಯ ತನಗಿಲ್ಲ. 'ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾ ಶುಭಂ' ಪೂರ್ವ ಜನ್ಮದಲ್ಲಿ ಎಷ್ಟು ಸಂಸಾರಗಳನ್ನು ಛಿದ್ರ ಮಾಡಿದ್ದಳೋ – ಅವರ ಫಲವನ್ನು ಈಗ ಅನುಭವಿಸುತ್ತಿದ್ದಳು. ಈಗಲೀಗ ತಾನೇ ಅವಳ ಮನ ಸ್ಸಿಗೆ ಒಂದು ಬಗೆಯ ಸಮಾಧಾನವಾಗಿತ್ತು. ಬೆಂಗಾಡಾದ ಈ ಜೀವನ ವನ್ನು ಜೀವಿಸಲು ಹಿರಿ ಉದ್ದೇಶವನ್ನು ಕಲ್ಪಿಸಿಕೊಂಡಿದ್ದಳು. ಅದೇನೆಂ ದರೆ ವೀಣೆ. ವೀಣೆಯನ್ನು ಎಡೆಬಿಡದೆ ಅಭ್ಯಾಸ ಮಾಡಿ ಪಾಂಡಿತ್ಯವನ್ನು ಸಂಪಾದಿಸಿಕೊಳ್ಳಬೇಕು. ಇದಕ್ಕಾಗಿ ಬದುಕನ್ನೆಲ್ಲ ಸವೆಸಬೇಕು. ಕೈ ಸೋಕಿದೊಡನೆ ವೀಣೆಯ ತಂತಿಯಿಂದ ನಾದಬ್ರಹ್ಮವು ಮಧುರವಾಗಿ ಹೊರಟು ಬ್ರಹ್ಮಾಂಡದಲ್ಲಿ ಲಯವಾಗುವಂತೆ ತನ್ನ ಬಾಳಿನ ದಿನಗಳನ್ನೂ ಬ್ರಹ್ಮಾಂಡದಲ್ಲಿ ಲಯಮಾಡಬೇಕು. ವಿದ್ಯೆಗೋಸ್ಕರ ವೀಣೆಯನ್ನು ಕಲಿತು,

ಬದುಕಿಗೋಸ್ಕರ ಜೀವನವನ್ನು ಜೀವಿಸಿ, ಮೃತ್ಯು ಬಂದಾಗ ಕಣ್ಣು ಮುಚ್ಚಬೇಕು ....

ಆದರೆ ಈ ಬಾಳಿಗೆಲ್ಲ ಈಗ ವಕ್ರಗತಿ ಬಂದಿತ್ತು. ನಾಗರಾಜ ರಾತ್ರಿ ಮನೆಗೆ ಬರಬೇಕೆಂದು ಹೇಳಿದ್ದ.

" ಹೇಳು ಪದ್ಮ, ಒಂದು ಮಾತು, ಒಂದು ಕ್ಷಣ. "

ಈ ಮಾತುಗಳು ಪದೇ ಪದೇ ಕಿವಿಯನ್ನು ಕೊರೆಯುತ್ತಿದ್ದವು. ಹುತ್ತದ ಹಾವು ಹೊರಕ್ಕೆ ಬಂದು ಈಗಲೀಗ ಬುಸುಗುಟ್ಟುತ್ತಿತ್ತು. ಲಲಿತೆ ಇದನ್ನು ಕೇಳಿದರೆ ಏನನ್ನುತ್ತಾಳೆ ? ತನ್ನ ಪತಿ ನಿಷ್ಕಳಂಕರೆಂದು ಅಡಿಗಡಿಗೆ ಹೇಳಿಕೊಳ್ಳುತ್ತಿದ್ದಳು. ಇಂಥವರ ಕೈ ಹಿಡಿದುದಕ್ಕೆ ತಾನು ಪುಣ್ಯವಂತೆ ಯೆಂದು ಹೆಮ್ಮೆಪಡುತ್ತಿದ್ದಳು, ಈಗ ನಡೆದ ಸಂಗತಿ ಅವಳ ಕಿವಿಗೆ ಬಿದ್ದರೆ ........

ಛೆ, ಇದನ್ನು ಅವಳಿಗೆ ತಿಳಿಸಬಾರದು. ಅವಳ ಮನಸ್ಸನ್ನು ಕೆಡಿಸಿ ಅವಳ ಸಂಸಾರವನ್ನು ಒಡೆಯಬಾರದು. ಹಿಂದೆ ಎಷ್ಟು ಸಂಸಾರಗಳನ್ನು ಒಡೆದಳೋ ಅದರ ಫಲವನ್ನೆಲ್ಲ ಈಗ ಅನುಭವಿಸಿ ಆಯಿತು. ಈಗ ಇನ್ನೂ ಒಂದು ಸಂಸಾರವನ್ನು ಒಡೆದು ಅದರ ಪಾಪವನ್ನೂ ಕಟ್ಟಿಕೊಳ್ಳುವುದೇ ?

ಅದಿರಲಿ, ಮುಂದೆ ಗತಿ? ಆ ಮನೆಯಲ್ಲಿ ಇನ್ನಿರಲು ಸಾಧ್ಯವೆ, ಸಮಂಜಸವೆ ? ಬುಸುಗುಟ್ಟಿದ ನಾಗರ ಹಾವು ಎಂದಾದರೂ ಕಚ್ಚಬಹುದು. ತಿಳಿದು ತಿಳಿದು ಅದರ ಮುಂದೆ ಸುಳಿದಾಡುವುದು ದಡ್ಡತನ. ಅವರ ಮನೆ ಇನ್ನು ಬೇಡ, ಅದನ್ನು ಬಿಟ್ಟುಬಿಡುವುದೇ ಲೇಸು.

ಹೀಗೆ ಯೋಚಿಸುತ್ತ ಪ್ರಾಣದೇವರ ಗುಡಿಯ ಹತ್ತಿರ ಬಂದಳು. ಝುಣ ಝುಣನೆಂದು ಘಂಟೆಯ ಸದ್ದು ಕೇಳಿಸಿತು.

ಓ, ಪ್ರಾಣದೇವರೂ ಅದನ್ನೆ ಅಪ್ಪಣೆ ಕೊಡಿಸುತ್ತಾರೆ. ಲಲಿತೆ ಯನ್ನು ಮನೆಗೆ ಕರೆತಂದು ಸ್ನಾನ ಮಾಡಿಸಿ ಆ ಕೂಡಲೆ ಹೊರಬೀಳಬೇಕು. ಎಲ್ಲಿಗೆ ಹೋಗುವುದೆಂಬ ಚಿಂತೆ ಬೇಡ. ನಾಲ್ಕೈದು ರೂಪಾಯಿ ಬಾಡಿ ಗೆಗೆ ಒಂದು ಮನೆ ನೋಡಿಕೊಳ್ಳಬಹುದು. ಮಣ್ಣಿನ ಮಡಕೆಗಳನ್ನು ತಂದು ಹೊಟ್ಟೆಯ ಪಾಡನ್ನು ಕಳೆಯಬಹುದು. ತಿಂಗಳಿಗೆ ಹದಿನೈದು

ರೂಪಾಯಿ ದೃಢವಾಗಿ ಬರುತ್ತೆ. ಅದರಿಂದ ಒಂದು ಪ್ರಾಣಿಯ ಜೀವನ ಹೇಗಾದರೂ ನಡೆಯುತ್ತೆ ....

ಹೀಗೆ ನಿರ್ಧರಿಸಿಕೊಂಡು ಪದ್ಮ ಆಸ್ಪತ್ರೆಯನ್ನು ಸೇರಿದಳು. ಲಲಿತೆಗೆ ಊಟವನ್ನು ಬಡಿಸಿದ ಬಳಿಕ ಅಲ್ಲಿಯೇ ಮಲಗಿದಳು.

○ ○ ○

ಪದ್ಮ ಬೇರೆ ಮನೆಗೆ ಹೋದ ನಾಲ್ಕು ದಿನಗಳ ನಂತರ ರಾಜಾರಾಯರ ಮಗಳ ಮೂಲಕ ಅವರಿಗೆ ಈ ಸಂಗತಿ ತಿಳಿಯಿತು. ಲಲಿತೆಯ ಮನೆಯನ್ನು ಅಕಸ್ಮಾತ್ತಾಗಿ ಬಿಟ್ಟು ಬಂದುದಕ್ಕೆ ಅವರೆಲ್ಲರಿಗೂ ಆಶ್ಚರ್ಯವಾಗಿತ್ತು. ಕಾರಣ ಬಹಳ ದಿನಗಳವರೆಗೆ ಯಾರಿಗೂ ತಿಳಿಯಲಿಲ್ಲ. ವೀಣೆಯ ಅಭ್ಯಾಸಕ್ಕೆ ಹೆಚ್ಚು ವಿರಾಮ ಬೇಕಾದ್ದರಿಂದ ಅವರ ಮನೆಯನ್ನು ಬಿಡಬೇಕಾಗಿ ಬಂದಿತೆಂದು ಪದ್ಮ ಎಲ್ಲರ ಹತ್ತಿರವೂ ಹೇಳುತ್ತಿದ್ದಳು. ಆದರೆ ಮನಸ್ಸಿನಲ್ಲಿ ರಹಸ್ಯವೇನೋ ಇಟ್ಟುಕೊಂಡು ಅದನ್ನು ಬಚ್ಚಿಡುವುದಕ್ಕೆ ಈ ಸೋಗು ಹಾಕಿರಬೇಕೆಂದು ಸಾಧಾರಣವಾಗಿ ಎಲ್ಲರಿಗೂ ಗೊತ್ತಿತ್ತು.

ರಾಜಾರಾಯರು ಒಳ್ಳೆಯ ಅನುಭವಶಾಲಿ ; ಬುದ್ಧಿ ಹೇಳಲು ತಕ್ಕವರು. ಅವರು ತಮ್ಮ ಮಗಳನ್ನು ಹತ್ತಿರ ಕೂರಿಸಿ ಪದ್ಮಳಿಗೆ ಹೇಳಿದರು. ಬೇರೆ ಮನೆ ಮಾಡುವುದೆಂದರೆ ಖರ್ಚು ಜಾಸ್ತಿ. ಒಬ್ಬಂಟಿಗಳಾಗಿರುವುದೂ ಕಷ್ಟ. ತಮ್ಮ ಮನೆಯಲ್ಲಿ ಮಕ್ಕಳೊಂದಿಗೆ ಓಡಾಡಿಕೊಂಡು ಬೇಕಾದಂತೆ ವೀಣೆಯನ್ನು ಅಭ್ಯಾಸ ಮಾಡಿಕೊಂಡಿರಬಹುದು ಇತ್ಯಾದಿ. ಆದರೆ ಪದ್ಮಳು ಒಪ್ಪಲಿಲ್ಲ. ನಾಗರಾಜನ ವರ್ತನೆಯಿಂದ ಅವಳಿಗೆ ಗಂಡಸು ಜಾತಿಯಲ್ಲಿಯೇ ರೋಷ ಹುಟ್ಟಿತ್ತು. ಇನ್ನೆಂದೆಂದಿಗೂ ಪರಪುರುಷರ ಮನೆಯಲ್ಲಿ ವಾಸವಾಗಿರಕೂಡದೆಂದು ಹಠ ತೊಟ್ಟಳು.

ರಾಜಾರಾಯರು ಅದಕ್ಕೆ ಮೇಲೆ ಬಲಾತ್ಕರಿಸಲಿಲ್ಲ. "ಹೋಗಲಿ, ನೀನೀಗ ವೀಣೆಗೇನು ಮಾಡುವೆ ? "

ಅದೊಂದೇ ದೊಡ್ಡ ಸಮಸ್ಯೆಯಾಗಿತ್ತು. ಈಗ ನಾಲ್ಕು ದಿನದಿಂದ ಆದ ಖರ್ಚು ಕಳೆದು ನಲವತ್ತು ರೂಪಾಯಿ ಮಾತ್ರ ಉಳಿದಿತ್ತು. ಇನ್ನೂ ಒಂದೆರಡು ತಿಂಗಳವರೆಗೆ ಹಾಗೆ ಹೀಗೆ ಕಷ್ಟಪಟ್ಟು ಹಣ ಕೂಡಿದ ನಂತರ ಒಂದು ಹಳೆಯ ವೀಣೆಯನ್ನು ಕೊಂಡುಕೊಳ್ಳಬೇಕೆಂದಿದ್ದಳು.

"ಅದೆಲ್ಲ ಆಗದ ಹೋದ ಕೆಲಸ, ನಿನ್ನಲ್ಲಿರೋ ಹಣದಲ್ಲಿ ಖರ್ಚಿಗೆ ಸ್ವಲ್ಪ ಇಟ್ಟುಕೊಂಡು ಮುವ್ವತ್ತು ರೂಪಾಯಿ ಇಲ್ಲಿ ತಾ. ಬಾಕಿ ಎಷ್ಟಾಗುತ್ತೋ ಅಷ್ಟನ್ನು ಹಾಕಿ ಒಳ್ಳೆಯ ವೀಣೆಯನ್ನು ತೆಗೆದು ಕೊಡೋಣ"

ಪದ್ಮ ತನ್ನ ಭಾಗದ ದೇವರು ಈಗಲೀಗ ಕಣ್ಣು ತೆರೆಯುತ್ತಿದ್ದಾನೆಂದುಕೊಂಡಳು. "ಜಗತ್ತಿನ ಗಂಡಸರೆಲ್ಲ ನಿಮ್ಮಂತೆ ದಯಾಮೂರ್ತಿಗಳಾಗಿದ್ದರೆ ನನ್ನಂಥ ನಿರ್ಭಾಗ್ಯೆಯರು ಇರುವುದಕ್ಕೆ ಕಾರಣವೇ ಇಲ್ಲ" ಎಂದು ತನ್ನಲ್ಲಿ ತಾನೇ ಹೇಳಿಕೊಳ್ಳುತ್ತ ನಿಟ್ಟುಸಿರುಬಿಟ್ಟಳು.

೦ ೦ ೦

ರಾಜಾರಾಯರು ತಂದ ವೀಣೆ ಅಂದವಾಗಿ ದೊಡ್ಡದಾಗಿತ್ತು. ಮಧುರವಾಗಿ ನಾದ ಕೊಡುತ್ತಿತ್ತು. ಡೆಪ್ಯುಟಿ ಕಮಿಷನರು ತಮ್ಮ ಒಬ್ಬಳೇ ಮಗಳಿಗಾಗಿ ತೆಗೆದಿದ್ದರಂತೆ. ಆಕೆ ಎರಡು ಮೂರು ವರ್ಷ ಅಭ್ಯಾಸಮಾಡಿ ಅನಂತರ ತೀರಿಕೊಂಡಳು. ಅವರ ಮನೆಯಲ್ಲಿ ವೀಣೆ ಹಿಡಿಯುವವರು ಯಾರೂ ಇಲ್ಲದ್ದರಿಂದ ಡೆಪ್ಯುಟಿ ಕಮಿಷನರು ಅದನ್ನು ಮಾರಿಬಿಟ್ಟರು. ನೂರ ಇಪ್ಪತ್ತು ರೂಪಾಯಿನ ವೀಣೆ ಅಗ್ಗವಾಗಿ ಅರವತ್ತು ರೂಪಾಯಿಗೆ ಲಭಿಸಿತು.

ವೀಣೆ ದೊರೆತ ಘಳಿಗೆ ಒಳ್ಳೆಯದು. ಒಂದು ತಿಂಗಳೊಳಗೆ ಪದ್ಮಳಿಗೆ ಎರಡು ಪಾಠ ದೊರೆಯಿತು. ಎರಡರಿಂದ ತಿಂಗಳಿಗೆ ಮುವ್ವತ್ತು ರೂಪಾಯಿ ವೀಣೆಗಾಗಿ ರಾಜಾರಾಯರಿಗೆ ಕೊಡಬೇಕಾಗಿದ್ದ ಬಾಕಿ ಹಣವನ್ನು ಕೊಟ್ಟುಬಿಟ್ಟಳು. ಉಳಿದ ಹಣಕ್ಕೆ ಒಂದೊಂದಾಗಿ ಪಾತ್ರೆ ಪದಾರ್ಥ, ಸೀರೆ ಜಾಕೆಟ್ಟುಗಳನ್ನು ಕೊಂಡುಕೊಂಡಳು.

ಒಂದೆರಡು ವರ್ಷದಲ್ಲಿ ಪದ್ಮ ಪ್ರಸಿದ್ಧಿಗೆ ಬಂದಳು. ಹತ್ತು ಹನ್ನೆರಡು ಮಂದಿ ಪಾಠಕ್ಕೆ ಬರುತ್ತಿದ್ದರು. ಆಗಾಗ ಕಚೇರಿಗಳು ನಡೆಯುವುವು. ತಿಂಗಳಿಗೊಮ್ಮೆ ತಿರುಚನಾಪಳ್ಳಿಗೆ ಹೋಗಿ ರೇಡಿಯೋದಲ್ಲಿ ಹಾಡುವಳು. ಮೂರು ವರ್ಷದಲ್ಲಿ ಬ್ಯಾಂಕಿನ ಸೇವಿಂಗ್ಸ್ ಲೆಕ್ಕವು ದೊಡ್ಡದ್ದಾಯಿತು. ಅದರೊಂದಿಗೆ ಅವಳ ಜೀವನದ ಅಂತಸ್ತೂ ಏರಿತು. ಇಪತ್ತೈದು ರೂಪಾಯಿ ಬಾಡಿಗೆ ಮನೆ. ಅಡಿಗೆ ಮಾಡಲು ವಯಸ್ಸಾದ

ಹೆಂಗಸು. ಹೊರಗೆಲಸವನ್ನು ನೋಡಿಕೊಳ್ಳಲು ಚಿಕ್ಕ ಹುಡುಗ.

ಶನಿವಾರದ ದಿನ ಪ್ರಾಣದೇವರ ಗುಡಿಗೆ ಹೋಗುವುದು ಮಾತ್ರ ತಪ್ಪಲಿಲ್ಲ. ಅಂದು ಎಷ್ಟು ಅಗತ್ಯವಾದ ಕೆಲಸವಿದ್ದರೂ ಬೆಳಿಗ್ಗೆಯೋ ಸಂಜೆಯೋ ದೇವರ ದರ್ಶನ ಮಾಡಿಕೊಂಡು ಬಂದು ಬಿಡುವಳು. ಒಂದು ಶನಿವಾರ ಗುಡಿಗೆ ಹೋಗಿ ದೇವರಿಗೆ ಕಾಯಿ ಕರ್ಪೂರವನ್ನು ಕೊಟ್ಟು ಪೂಜೆ ಮಾಡಿಸುತ್ತಿದ್ದಳು. ಎಡಗಣ್ಣು ಮಿಡಿಯುತ್ತಿತ್ತು. ಸರಿ, ಇನ್ನೊಂದು ಕಚೇರಿಯೋ ಕಾಲಕ್ಷೇಪವೋ ದೊರೆಯಬಹುದು. ಅಥವಾ ಸಿನಿಮಾದವರು ಕರೆಯುತ್ತಾರೋ! ಥೂ, ಸಿನಿಮಾಕ್ಕೆ ಮಾತ್ರ ಈಗ ಹೋಗಬಾರದಪ್ಪ. ಮೊನ್ನೆ ಅಂಬಿಕಾ ಫಿಲಂ ಕಂಪೆನಿಯವರು ಬಂದು ಮೂರು ಸಾವಿರ ರೂಪಾಯಿ ಕೊಡುತ್ತೇವೆಂದು ಕರೆದರು. ಶೀಲವಂತರು ಒಬ್ಬಂಟಿಗರಾಗಿ ಹೋಗಿ ಸಿನಿಮಾದಲ್ಲಿ ನಟಿಸಿ ಶೀಲವನ್ನುಳಿಸಿಕೊಂಡು ಹಿಂತಿರುಗಿ ಬರುವುದೆಂದರೆ ಸಾಧ್ಯವಿಲ್ಲದ ಕೆಲಸ. ಗಂಡಂದಿರ ಜತೆಯಲ್ಲಿ ಹೋಗಿ ನಟಿಸುವುದು ಬೇರೆ ಮಾತು. ಶೀಲಕ್ಕೆ ಶೀಲವೂ ಉಳಿಯುತ್ತೆ. ಕೀರ್ತಿಗೆ ಕೀರ್ತಿಯೂ ಬರುತ್ತೆ.

ಆದರೆ ಆ ಭಾಗ್ಯ ಪದ್ಮ ಎಲ್ಲಿಂದ ತರುವಳು? ಎಷ್ಟು ಕೋಟಿ ಪುಣ್ಯ ಮಾಡಿದ್ದರೋ ಪತಿ ಸೇವೆ ಲಭಿಸುವುದು! ಇಡೀ ಜೀವನವನ್ನು ಒಂಟಿಯಾಗಿ, ಒಬ್ಬಂಟಿಯಾಗಿ ಕಳೆಯಬೇಕೆಂದು ಅವಳ ವಿಧಿಯಿರುವಾಗ........

ಕೃಷ್ಣಮೂರ್ತಿ ಈಗ ಏನು ಮಾಡಿಕೊಂಡಿದಾರೋ! ಅದೇ ಸೊಸೈಟಿಯಲ್ಲೇ ಇದಾರೋ, ಇನ್ನೆಲ್ಲಿಗಾದರೂ ಹೋದರೋ; ಒಂಟಿಗರಾಗಿಯೇ ಕಾಲ ತಳ್ಳುತ್ತಾರೋ, ಜತೆಗೆ ಇನ್ನಾವಳಾದರೂ ಬಂದಿರುವಳೋ!.... ತಾನು ಸಂಸಾರ ಮಾಡುತ್ತಿದ್ದಾಗ ಎಷ್ಟೋ ಬಾರಿ – ಲೆಕ್ಕವಿಲ್ಲದಷ್ಟು ಬಾರಿ – ಹೇಳುತ್ತಿದ್ದರು ತನ್ನನ್ನು ಬಿಟ್ಟು ಒಂದು ದಿನವೂ ಇರುವುದಕ್ಕಾಗುವುದಿಲ್ಲವೆಂತ. ಈಗ ಮೂರು ವರ್ಷಗಳಾದವು. ಮೂರು ವರ್ಷದಲ್ಲಿ ಒಂದು ದಿನವಾದರೂ ತನ್ನನ್ನು ನೆನೆಸಿಕೊಂಡಿರುವರೋ ಇಲ್ಲವೋ. ಕಲ್ಲು ಮನಸ್ಸಿನ ಗಂಡಸರು! ಕಿತ್ತು ಹೋದ ವೀಣೆಯ ತಂತಿಯನ್ನು ಅತ್ತ ಬಿಸಾಟು ಹೊಸ ತಂತಿಯನ್ನು ಆತುರದಿಂದ ಹಾಕಿಕೊಳ್ಳುವಂತೆ; ಹೆಂಡತಿ ಸತ್ತುಹೋದರಾಗಲೀ ಬಿಟ್ಟು ಹೋದರಾಗಲೀ ಸಡಗರದಿಂದ ಇನ್ನೊಬ್ಬ ಹುಡುಗಿಗೆ

ಮಾಂಗಲ್ಯ ಕಟ್ಟುತ್ತಾರೆ. ಇನ್ನು ತನಗೆ ಪತಿ ಭಾಗ್ಯವೆಲ್ಲಿಯದು ! ಕೊನೆಯು ತನಕ ಹೀಗೆಯೇ ಬಾಳಬೇಕಾದ್ದೆ !

" ಅಯ್ಯೋ ದೇವರೆ ! ಇಷ್ಟನ್ನು ಕೊಟ್ಟೆ. ನನ್ನ ಪತಿಯನ್ನು ಕೊಡಲಾರೆಯಾ ? "

ಗರ್ಭ ಗುಡಿಯಲ್ಲಿ ಅರ್ಚಕರು ಘಂಟೆಯನ್ನು ಬಾರಿಸುತ್ತ ದೇವರಿಗೆ ಮಂಗಳಾರತಿ ಎತ್ತುತ್ತಿದ್ದರು. ಪದ್ಮ ಎರಡು ಕೈಗಳನ್ನೂ ಜೋಡಿಸಿಕೊಂಡು ದೇವರನ್ನೇ ನೋಡುತ್ತಿದ್ದಳು. ಕಂಗಳಲ್ಲಿ ಒಂದೆರಡು ತೊಟ್ಟು ನೀರು ನಿಂತಿತ್ತು. ಪೂಜಾರಿಯು ದೀಪದ ತಟ್ಟೆಯಲ್ಲಿ ಕುಂಕುಮವನ್ನೆತ್ತಿಕೊಂಡು ಬಂದರು. ಪದ್ಮ ಕುಂಕುಮವನ್ನು ಹಣೆಗೆ ಹಚ್ಚಿಕೊಳ್ಳುತ್ತ ನೆನೆಸಿಕೊಂಡಳು.

" ತನ್ನವನೆಂಬ ಪತಿ ಇಲ್ಲದ ಮೇಲೆ ಕುಂಕುಮವಾದರೂ ಏಕೆ ? "

ಅವಳ ಕೈ ನಡುಗಿತು. ಕಣ್ಣುಗಳಿಂದ ದಳದಳ ನೀರು ಸುರಿಯಿತು. ಇನ್ನೊಬ್ಬ ಪೂಜಾರಿಯು ಪ್ರಸಾದದ ತಟ್ಟೆಯನ್ನು ತಂದು ಕೊಟ್ಟ. ಸೆರಗಿನಿಂದ ಕಣ್ಣನ್ನೊರೆಸಿಕೊಂಡು ಪದ್ಮ ತಟ್ಟೆಯನ್ನು ತೆಗೆದುಕೊಳ್ಳುತ್ತ ತಲೆ ಎತ್ತಿ ಎದುರು ಸಾಲನ್ನು ನೋಡಿದಳು. ಅಲ್ಲೊಬ್ಬ ಕೆದರಿದ ಕೂದಲ ಗಡ್ಡದ ಮನುಷ್ಯ ತನ್ನನ್ನೇ ಎವೆಯಿಕ್ಕದೆ ನೋಡುತ್ತಿದ್ದ.

— ಕೃಷ್ಣಮೂರ್ತಿ !

ಪದ್ಮ ಮತ್ತೆ ಕಣ್ಣನ್ನೊರೆಸಿಕೊಂಡು ದಿಟ್ಟಿಸಿ ನೋಡಿದಳು. ಅವರೆ, ಕೃಷ್ಣಮೂರ್ತಿ, ತನ್ನ ಪತಿದೇವರು !

" ಪದ್ಮ ! "

" ನೀವೆಲ್ಲಿ ಬಂದಿರಿ ! "

ಗಾಡಿಯಲ್ಲಿ ಕೂತು ಮನೆಗೆ ಹೋಗುವಾಗ ಕೃಷ್ಣಮೂರ್ತಿ ತನ್ನ ಕತೆಯನ್ನು ಹೇಳಿದ. ಪದ್ಮ ಹೊರಟು ಬಂದ ಮೇಲೆ ಅವನ ಮನಸ್ಸು ಕಳಕಳಿಸಿಹೋಯಿತಂತೆ. ಆತುರಪಟ್ಟು ಅವಳನ್ನು ಹೊರಡಿಸಿದ ಹುಚ್ಚುತನ ಮಾರನೆಯ ದಿನ ತಿಳಿಯಿತು. ಬೆಂಗಳೂರಲ್ಲೆಲ್ಲಾದರೂ ಅವಳು ಸಿಕ್ಕಿದರೆ ತಕ್ಷಣ ತಿಳಿಸಬೇಕೆಂದು ಹೋಗಿ ಬರುವವರ ಕೈಯಲ್ಲೆಲ್ಲಾ ಹೇಳಿ ಕಳುಹಿಸಿದ. ಎರಡು ದಿನವಾದ ಮೇಲೆ ಕೃಷ್ಣಮೂರ್ತಿಯೇ ಖುದ್ದಾಗಿ ಬೆಂಗ

ಊರಿಗೆ ಬಂದು ಹುಡುಕಿದನಂತೆ. ಪದ್ಮ ಸಿಕ್ಕಲಿಲ್ಲ. ದೇವರು ನಡೆಸಿದಂ ತಾಗಲೆಂದು ದೇವನಹಳ್ಳಿಗೆ ಹಿಂತಿರುಗಿ ಹೋದ. ಮುಳ್ಳು ಚುಚ್ಚುವ ಹಾಸಿಗೆಯಲ್ಲಿ ಹೊರಳಾಡುತ್ತ ಕಾಲ ಕಳೆದ.

ಆರು ತಿಂಗಳ ಹಿಂದೆ ಸೊಸೈಟಿ ನೌಕರರೆಲ್ಲ ಠೇವಣಿ ಕಟ್ಟಬೇಕೆಂದು ರಿಜಿಸ್ಟ್ರಾರ್ರು ಹುಕುಂ ಮಾಡಿದರಂತೆ. ಕೃಷ್ಣಮೂರ್ತಿ ಠೇವಣಿಯನ್ನು ಒಂದು ತಿಂಗಳಲ್ಲಿ ಕಟ್ಟಬೇಕಾಗಿತ್ತು.

" ನೂರು ರೂಪಾಯಿ ತಾನೇ ? "

" ಹೌದು, ನೂರು ರೂಪಾಯಿ ಎಲ್ಲಿಂದ ತರುವುದು ? ಒಂದು ತಿಂಗಳ ನಂತರ ಕೆಲಸ ಬಿಡಬೇಕಾಗಿ ಬಂತು. ಆಗಲಿಂದ ದಾಡಿ ಬೆಳೆಸಿ ಕೊಂಡು ಊರೂರು ಅಲೆಯುತ್ತ ಇಲ್ಲಿಗೆ ಬಂದೆ "

" ನೂರು ರೂಪಾಯಲ್ಲ, ಸಾವಿರ ರೂಪಾಯಿ ಆದರೂ ಕಟ್ಟಬ ಹುದು. ಒಳ್ಳೆಯ ಕೆಲಸ ದೊರೆಯುವುದಾದರೆ "

" ಸಾವಿರ ರೂಪಾಯಿ ಕೊಡಬಲ್ಲೆಯೊ ? ಅಷ್ಟು ಇದೆಯೆ ನಿನ್ನ ಹತ್ತಿರ ? "

" ಹ್ಞು, ದೇವರ ದಯೆಯಿಂದ ಎಷ್ಟು ಬೇಕಾದರೂ ಕೊಡಬಲ್ಲೆ. ನಿಮಗಿಂತ ದೊಡ್ಡ ವಸ್ತು ಪ್ರಪಂಚದಲ್ಲೇನಿದೆ ? ಒಳ್ಳೆಯ ಕೆಲಸ ಇಲ್ಲೇ ಬೆಂಗಳೂರಲ್ಲಿ ಎಲ್ಲಿಯಾದರೂ ಸಿಕ್ಕಿದರೆ ಸುಖವಾಗಿರಬಹುದು. ಇರಿ, ರಾಜಾರಾಯರಿಗೆ ಹೇಳಿ ನೋಡೋಣ "

" ತಾಳು, ಮೈಸೂರು ಬ್ಯಾಂಕಿನಲ್ಲಿ ನಲವತ್ತು ರೂಪಾಯಿನ ಷರಾಫ್ ಕೆಲಸ ಖಾಲಿ ಇದೆಯಂತೆ ಕಣೆ. ಸಾವಿರದ ಐದು ನೂರು ರೂಪಾಯಿ ಠೇವಣಾತಿ ಬೇಕಂತೆ. ಬೆಳಿಗ್ಗೆ ಹೋಟಲಿನಲ್ಲಿ ಕಾಫಿ ಕುಡಿ ಯುತ್ತಿದ್ದಾಗ ಪೇಪರಿನಲ್ಲಿ ಓದಿದೆ "

" ಹಾಗಾದರೆ ನಾಳೆಯೇ ಚೆಕ್ ಬರೆದುಕೊಡುತ್ತೇನಲ್ಲ "



# ಒಂದು ದಿನ

ಒಂದು ದಿನ, ಸರಸಮ್ಮನ ಒಂದೇ ಒಂದು ಮಗು ಕಣ್ಣು ಮುಚ್ಚಿ ಕೊಂಡಿತು. ಅದನ್ನು ನೆನೆಸಿ ನೆನೆಸಿ ಸರಸಮ್ಮ ಮರುಗುವಳು.

ಜಾಕು ಒಳ್ಳೇ ಮುದ್ದು ಮುದ್ದಾಗಿತ್ತು. ಮೊನ್ನೆ ತಾನೇ ಎರಡನೇ ವರ್ಷದ ವರ್ಧಂತಿ ಹಬ್ಬ ಮಾಡಿದ್ದರು. ತಪ್ಪು ತಪ್ಪು ಹೆಜ್ಜೆಗಳನ್ನಿಡುತ್ತ ಮನೆಯಲ್ಲಿ ಓಡಾಡುತ್ತಿತ್ತು. ಮನೆಯಿಂದ ಅಂಗಳಕ್ಕೆ ಹಾದು, ಅಂಗಳ ದಿಂದ ಬೀದಿಗೆ ಹೋಗಿ ಅಲ್ಲಿ ಕೂತು ಮಣ್ಣೆರಚುತ್ತಿತ್ತು. ತಲೆ, ಮುಖ, ಹೊಟ್ಟೆ, ಕೈ, ಕಾಲು– ಇವೆಲ್ಲ ಮಣ್ಣೇ ಮಣ್ಣಾಗಿರುತ್ತಿತ್ತು. ಬೀದಿಯಲ್ಲಿ ಹೋಗುವವರಾದರೂ ನೋಡಿ ಕರುಣೆಯಿಂದ ಅದನ್ನು ಒಳಗೆ ಬಿಡುತ್ತಿ ದ್ದರು. ಇಲ್ಲದಿದ್ದರೆ ಸಂಜೆ ರಾಜು ಮನೆಗೆ ಬರುವ ತನಕ ಅಲ್ಲಿಯೇ ಇರುತ್ತಿತ್ತು.

ರಾಜು ಬೀದಿಯ ಆ ಕೊನೆಯಲ್ಲಿ ಬರುತ್ತಿರುವಾಗಲೇ ಜಾಕು ಕೈಗ ಳಿಂದ ಚಪ್ಪಾಳೆ ತಟ್ಟುತ್ತ ಕೇಕೆ ಹಾಕುವುದು. ಮುಖದ ತುಂಬ ನಗು ವುದು. "ಪ್ಪಾ-ಪ್ಪಾ" ಎಂದು ಕಿರುಚುವುದು. ಅವನು ಅಲ್ಲಿಯೇ ಸೈಕಲ್ಲಿಂದಿಳಿದು ಮಗುವನ್ನೆತ್ತಿ ಅದರ ಮೇಲೆ ಕೂರಿಸಿ ಅಂಗಳಕ್ಕೆ ತಳ್ಳಿ ಕೊಂಡು ಬರುವನು. ಅಲ್ಲೊಂದು ಪಕ್ಕಕ್ಕೆ ಸೈಕಲ್ ನಿಲ್ಲಿಸಿ ಜಾಕುವನ್ನೆ ತ್ತಿಕೊಂಡು ರೂಮಿನೊಳಕ್ಕೆ ಬರುವನು. ಸರಸಮ್ಮ ರೂಮಿನ ಕಿಟಕಿ ಯಿಂದ ಇದನ್ನೆಲ್ಲ ನೋಡುತ್ತ ರಾಜು ಮಗುವನ್ನೆತ್ತಿಕೊಂಡು ಬಂದೊಡನೆ ಬಾಗಿಲ ಹತ್ತಿರ ಹೋಗಿ ಎದುರುಗೊಳ್ಳುವಳು. ಆಗ ಜಾಕು ರಾಜು ಕೊರಳ ಸುತ್ತು ಕೈ ಹಾಕಿ ಮುಖಕ್ಕೆ ಮುಖ ಇಕ್ಕಿ ಸರಸಮ್ಮನ ಕಡೆ ಜಂಭ ದಿಂದ ನೋಡುವುದು. ಮತ್ತೆ ಕೇಕೆ ಹಾಕಿ ನಗುವುದು. ಇಬ್ಬರು ಅದನ್ನು ಮುತ್ತಿಟ್ಟುಕೊಳ್ಳುವರು. ಅನಂತರ ಸರಸಮ್ಮನು ಟೀ ತಂದು ಕೊಡಲು ಒಳಗೆ ಹೋಗುವಳು.

ಈಗ ಹಾಗೆ ಮುತ್ತಿಟ್ಟುಕೊಳ್ಳಲು ಜಾಕುವಿಲ್ಲ! ಸಾಯಂಕಾಲದಲ್ಲಿ ರಾಜುವಂತೂ ಮನೆಗೆ ಬರುವನು. ಮೊದಲಿನಂತೆ ಬೀದಿಯಲ್ಲೇ ಸೈಕಲ್ ನಿಲ್ಲಿಸುವುದಿಲ್ಲ. ವೇಗವಾಗಿ ಅಂಗಳದವರೆಗೂ ತುಳಿದುಕೊಂಡು ಬರು ವನು. ಅಲ್ಲಿ ತಟಕ್ಕನೆ ನಿಲ್ಲಿಸಿ ಇಳಿದು ಅದನ್ನು ಬದಿಗೆ ಒರಗಿಸಿಟ್ಟು ಸರ-

ಸರನೆ ರೂಮಿನೊಳಕ್ಕೆ ಹೋಗುವನು. ಔಡುಗಳನ್ನು ಅದುಮಿಕೊಂಡೇ ಕೋಟು ಷರಾಯಿಗಳನ್ನು ತೆಗೆದಿಟ್ಟು ಹೊಟ್ಟೆಗಷ್ಟು ಟೀ ಸುರಿದುಕೊಂಡು ಹೊರಗೆ ಹೊರಟು ಹೋಗುವನು. ಮಗುವನ್ನು ಮರೆತು ಮನೆಯಿಂದ ಹೊರಗೆ ಎಷ್ಟು ಹೊತ್ತು ಇರಲು ಸಾಧ್ಯವೋ ಅಷ್ಟು ಹೊತ್ತು ಇರುವನು. ಮಗುವನ್ನು ಮರೆತಿರಲು ಕೆಲಸಗಳನ್ನು ಹುಡುಕಿ ಹುಡುಕಿ ಮಾಡುವನು.

ಸರಸಮ್ಮನಿಗೆ ಹಾಗೆ ಆಗವೊಲ್ಲದು. ಒಂದೊಂದು ಕೆಲಸ ಮಾಡಿದಾಗಲೂ ಆ ಕೆಲಸದ ಹಿಂದೆ ಜಾಕು ಇಣಿಕಿ ನೋಡುವುದು. ಸ್ನಾನಕ್ಕಿಳಿದರೆ ಜಾಕು ಹತ್ತಿರ ಬಂದು ಗಂಗಾಳದ ನೀರನ್ನೆಲ್ಲ ಸಿಡಿಯಿಸಿ ಅರಸಿನದ ಬಟ್ಟಲು ಉರುಳಿಸಿ ಗಲಭೆ ಮಾಡುತ್ತಿತ್ತು. ಅಡಿಗೆ ಮಾಡುತ್ತಿದ್ದಾಗ ಹತ್ತಿರ ಕೂತು ಅದನ್ನು ಇದನ್ನು ಮುಗುಚಿ ಹಾಕುತ್ತಿತ್ತು. ಜಡೆ ಹೆಣೆದುಕೊಳ್ಳಲು ಕೂತರೆ ಎಣ್ಣೆ ಸೀಸೆ ಉರುಳಿಸುವುದೋ ಕುಂಕುಮವನ್ನು ಚೆಲ್ಲುವುದೋ ಮಾಡುತ್ತಿತ್ತು. ನೀರು ಸೇದಲು ಹೋದರೆ ಹಿಂದೆ ನಿಂತು ಹಗ್ಗ ಗುಂಜುತ್ತಿತ್ತು.

ಒಂದು ದಿನ ದೀಪಾವಳಿಯ ಹಬ್ಬ. ಸರಸಮ್ಮನ ತಂಗೀ ಗಂಡ ಚೊಚ್ಚಲು ದೀವಳಿಗೆಗೆ ಬಂದಿದ್ದರು. ಎಲ್ಲರದೂ ಸ್ನಾನ ಉಪ್ಪಿಟ್ಟು ಕಾಫಿ ಇವೆಲ್ಲ ಮುಗಿದಿತ್ತು. ಜಾಕು ಹೊಸ ಚಿಕ್ಕಪ್ಪನೊಂದಿಗೆ ಪೇಟೆಗೆ ಹೋಗಿದ್ದಳು. ಸರಸಮ್ಮ ಅಡಿಗೆಗೆ ಕೂತಿದ್ದಳು. ಇದ್ದಕ್ಕಿದ್ದ ಹಾಗೆ ಬಾವಿಯಲ್ಲಿ ಹಗ್ಗವೋ ಏನೋ ಬಿದ್ದ ಸದ್ದಾಯಿತು. ಅವರಿವರು ಬಂದು ಭಾವಿಯ ಬಳಿ ಗುಂಪು ಕಟ್ಟಿಕೊಂಡರು. ಅವರಲ್ಲಿ ಯಾರೋ ಭಯದಿಂದ ಕೇಳಿದರು " ಜಾಕು ಎಲ್ಲಿರೇ "

ಸರಸಮ್ಮ ಒಳಗಿನಿಂದ ಕೇಳಿಸಿಕೊಂಡು ಎದ್ದು ಬಂದಳು. ನಡುಗುತ್ತ ಬಾಗಿಲ ತನಕ ಬಂದು ಅದಕ್ಕೊರಗಿ ನಿಂತುಕೊಂಡಳು. ಭಾವಿಯ ಸುತ್ತುಮುತ್ತ ಜನ ನೆರೆದಿದ್ದರು. ಸೇದುವ ಹಗ್ಗ ಭಾವಿಯೊಳಗೆ ಬಿದ್ದು ಹೋಗಿತ್ತು.

" ಅದರೊಂದಿಗೆ ಜಾಕುವೂ ಬಿದ್ದುಹೋದಳೋ ಏನೋ ! "

ಸರಸಮ್ಮ ಹಾಗೆಯೇ ಬಾಗಿಲುವಾಡಕ್ಕೆ ಒರಗಿ ನಿಂತು ಶೋಕ ದೃಷ್ಟಿಯಿಂದ ಚಿಂತಿಸುತ್ತ ನಿಂತುಕೊಂಡಳು. ಜಾಕು ಭಾವಿಯಲ್ಲಿ ಬಿದ್ದು

ಹೋದಳು. ಕೊರೆಯುವ ನೀರಿನಲ್ಲಿ ಬಿದ್ದು ಮುಳುಗಿ ಹೋದಳು. ಇನ್ನು ಸ್ವಲ್ಪ ಹೊತ್ತಿನಲ್ಲಿ ತೇಲುವಳು. ಅವಳನ್ನೆತ್ತಿ ಅಲ್ಲೆಲ್ಲೋ ಒಂದು ಕಡೆ ಹೂತು ಬರುವರು. ಇದುವರೆಗೂ ಆಡಿಕೊಂಡಿದ್ದ ಪುಟ್ಟ ಮಗು ಒಂದೇ ಸಲ ಮಾಯವಾಗಿ ಹೋಯಿತು. ಮನೆಯ ತುಂಬ ನಲಿದಾಡುತ್ತಿದ್ದ ಜಾಕು ಒಂದೇ ಒಮ್ಮೆ ಸತ್ತು ಹೋಯಿತು.

ಭಾವಿಯ ಬಳಿ ಸೇರಿದ್ದ ಹೆಂಗಸರು ಹಾಗೆ ಹೀಗೆ ಮಾಡಿ ನೀರಲ್ಲಿ ಬಿದ್ದಿದ್ದ ಹಗ್ಗವನ್ನು ಎತ್ತಿ ಹಾಕಿದರು. ಮಗು ತೇಲಿ ಬರುತ್ತೇನೋ ಎಂದು ಕಣ್ಣೊಳಗೆ ಕಣ್ಣಿಟ್ಟು ನೋಡುತ್ತಿದ್ದರು. ಇಲ್ಲ, ಕೆಸರು ಜಾಸ್ತಿ ಇದೆ, ಹೂತು ಹೋಯಿತೋ ಏನೋ ! ಎಂದರು ಯಾರೋ ಒಬ್ಬರು.

ಸರಸಮ್ಮ ಪುನಃ ಅಂದುಕೊಂಡಳು – ಜಾಕು ತೇಲಿ ಬರಲಿಲ್ಲಂತೆ. ಕೆಸರಿನಲ್ಲಿ ಹೂತುಕೊಂಡಳಂತೆ. ಕೆಸರೊಳಗೇ ಕೆಸರಾಗಿ ಹೋದಳು. ಹೆತ್ತ ಪಾಪಿಗೆ ಒಂದಿಷ್ಟು ಮುಖ ಕೂಡ ತೋರಿಸಬಾರದೆಂದು ಮೇಲೆ ಬಾರದೆ ಹಾಗೆಯೇ ಪಾತಾಳದಲ್ಲಿ ಹೂತು ಹೋದಳು. ಚಳಿ ನೀರಿನಲ್ಲಿ ಕೊರಗಿ ಮೈ ತುಂಬ ಕೆಸರು ಮಾಡಿಕೊಂಡು ಕಡೆಗೆ ಸತ್ತೇ ಹೋಗಿದ್ದಳು....

ಅಷ್ಟರಲ್ಲಿ ಪೇಟೆಗೆ ಹೋಗಿದ್ದ ಜಾಕು ಬೀದಿಯಂಗಳದಿಂದ ಬಂದಳು. " ಮ್ಮಾ – ಮ್ಮಾ " ಎನ್ನುತ್ತ ಎತ್ತಿದ ಕೈಗಳಲ್ಲಿ ಬತ್ತಾಸು ಹಿಡಿದುಕೊಂಡು ತಪತಪನೆ ಓಡಿ ಬಂದಳು.

ಸರಸಮ್ಮ ಮಗುವಿನ ಕಡೆ ನೋಡಿದಳು. ಕಣ್ಣು ಹಿಸುಕಿಕೊಂಡು ಮತ್ತೆ ನೋಡಿದಳು. " ಜಾಕು, ಜಾಕು, ಬದುಕಿ ಬಂದುಬಿಟ್ಟೆಯೇನೇ ? " ಎನ್ನುತ್ತ ಎತ್ತಿಕೊಂಡಳು. " ನಿನಗೆ ಮೈ ಕೆಸರಾಗಲಿಲ್ಲ ? "

ಜಾಕು ಮುಖದ ತುಂಬ ನಕ್ಕಿತು. ಭಾವಿಯ ಹತ್ತಿರಿದ್ದವರೆಲ್ಲರೂ ಇತ್ತ ತಿರುಗಿ ಓಡಿ ಬಂದರು ........

ಅಂದಿನಂತೆಯೇ ಇಂದೂ ಜಾಕು ಕಣ್ಮರೆಯಾಗಿದ್ದಳು. ಮತ್ತೆ ಬಾರದಂತೆ ಕಣ್ಮರೆಯಾಗಿದ್ದಳು. ಅವಳ ಮೃತ ದೇಹವನ್ನು ಸುಟ್ಟು ಹಾಕಿದ್ದರು. ಹೂತು ಕೂಡ ಇರಲಿಲ್ಲ. ನಾಲ್ಕಾಣೆ ಬೆರಣಿ ತಂದು ಬೂದಿ ಬೂದಿಯಾಗಿ ಸುಟ್ಟಿದ್ದರು. ಮಗುವಿನ ತಂದೆಯು ಹೆಗಲ ಮೇಲೆ ಹೊತ್ತು ಕೊಂಡು ಹೋಗಿ ಸ್ಮಶಾನದಲ್ಲಿ ಸುಟ್ಟು ಬಂದಿದ್ದರು. ಅವರಿಗೆ ಮನಸ್ಸಾ

ದರೂ ಹೇಗೆ ಬಂದಿತೋ! ಕಲ್ಲೆದೆಯ ಗಂಡಸರು. ಮಗು ಬದುಕಿದ್ದಾಗ ಅದನ್ನು ಎತ್ತಿ ಕಚ್ಚಿ ಮುದ್ದಾಡುತ್ತಿದ್ದರು. ಅದು ಸತ್ತ ಮೇಲೆ ಅದೇ ಕೈಗಳಿಂದ ಅದನ್ನು ಹೊತ್ತುಕೊಂಡು ಹೋಗಿದ್ದರು. ರಾಕ್ಷಸರು!

ಮಗುವನ್ನು ಅತ್ತ ಸುಟ್ಟು ಬಂದ ಬಳಿಕ ಸ್ನಾನಮಾಡಿ ಊಟ ಮಾಡುತ್ತ ಯಾರೋ ಮುದುಕರನ್ನುತ್ತಿದ್ದರು – "ದೇವರು ಕೊಡುತ್ತಾನೆ, ಕೊಟ್ಟ ದೇವರು ಕಿತ್ತು ಕೊಳ್ಳುತ್ತಾನೆ. ಅದಕ್ಕೇಕೆ ಸುಮ್ಮನೆ ವ್ಯಥೆ?" — ಹೌದು, ಪಂಚೆ ಕಟ್ಟಿಕೊಂಡು ತಿರುಗುವ ಗಂಡಸರಿಗೆ ಇಂಥ ವೇದಾಂತ ಹೇಳುವುದು ಬಲು ಸುಲಭ. ಕರುಳು ಕಿತ್ತು ಹೆತ್ತ ಹೆಂಗಸರಿಗೆ ತಾನೇ ಅದರ ಬೇಗೆ ತಿಳಿಯಬೇಕು?

ಸರಸಮ್ಮನಿಗೆ ಹೆರಿಗೆಯೆಲ್ಲ ಜ್ಞಾಪಕ ಬಂದಿತು. ಒಂಭತ್ತು ತಿಂಗಳು ಪೂರ್ತಿಯಾಗಿ ಹೊತ್ತಿದ್ದಳು. ನಾಲ್ಕಾರು ದಿನ ಪ್ರಸವ ವೇದನೆ - ಆಸ್ಪತ್ರೆಗೆ ಹೋದುದು, ನರ್ಸುಗಳ ಉಪಚಾರ. ಅನಂತರ - - ಕೂಸು ಕಿರಿಚಿಕೊಂಡಿತು.

ಮಗು ದುಂಡು ದುಂಡಾಗಿ ಮುದ್ದಾಗಿ ಬೆಳೆಯಿತು. ಬೋರಲು ಬಿದ್ದಿತು. ದೇಕಿಕೊಂಡು ದೇಕಿಕೊಂಡು ಹೊಸಲು ದಾಟಿ ಅಂಬೆಗಾಲಿನಲ್ಲಿ ಮನೆಯಲ್ಲ ಓಡಾಡಿತು. ಜೊಲ್ಲು ಸುರಿಸುತ್ತ ಕೂತುಕೊಂಡು ಸರಸವಾಡಿ ಗೋಡೆ ಹಿಡಿದುಕೊಂಡು ನಿಂತಿತು. ಕೈಸಾಲೆಯಲ್ಲಿ ಕೂತು ಮಣ್ಣು ಮುಕ್ಕಿತು. ತಪ್ಪು ತಪ್ಪು ಹೆಜ್ಜೆಗಳನ್ನಿಕ್ಕಿ ಬಿದ್ದೆದ್ದಿತು. ತೊದಲು ತೊದಲು ಮಾತಾಡಿ ಕುಣಿದಾಡಿತು.

ಅದಕ್ಕೆ ಮಾಡುವ ಹಬ್ಬಗಳೇನೂ ಕಡಿಮೆ ಮಾಡಿರಲಿಲ್ಲ. ಬಟ್ಟೆಗಳಿಗೇನೂ ಕಡಿಮೆ ಇರಲಿಲ್ಲ. ಮನೆಯಲ್ಲಿ ಹಿರಿಯ ಮಗಳ ಮೊದಲ ಮಗುವೆಂದು ಜಾಕುವನ್ನು ಅದರ ತಾತ ಅಕ್ಕರೆಯಿಂದ ಸಾಕಿದ್ದರು. ಬಣ್ಣ ಬಣ್ಣದ ಫ್ರಾಕುಗಳನ್ನು ತೊಡಿಸಿದ್ದರು. ಬಗೆ ಬಗೆಯ ಹಬ್ಬಗಳನ್ನು ಮಾಡಿದ್ದರು. ಬೆಳಿಗ್ಗೆ ಅದು ಏಳು ಘಂಟೆಗೆ ಎದ್ದುಬಿಡುವುದು. ಸರಸಮ್ಮನು ಅದನ್ನು ಹೊರಗೆ ಕೂಡಿಸಿ ಆಮೇಲೆ ಮೈ ಕೈ ತೊಳೆದು, ನೀಟಾಗಿ ಫ್ರಾಕು ತೊಡಿಸಿ ಬೆಚ್ಚಗೆ ಹಾಲು ಕುಡಿಸುವಳು. ಹಾಲಿಗೆ ಸಕ್ಕರೆ ಹಾಕುತ್ತಿರುವಾಗ ಮಗು ಅವಳ ಬೆನ್ನ ಹಿಂದೆ ನಿಂತು ಮೆಲ್ಲಗೆ ಅಂಗೈಯನ್ನು

ಅವಳ ಮುಂದೆ ನೀಡುವುದು. "ಉಹ್ಞು, — ನಿಂಗೆ ಇವತ್ತು ಸಕ್ಕರೆ ಇಲ್ಲ. ಸುಮ್ಮನೆ ಸಕ್ಕರೆ ತಿನ್ನಬಾರದಮ್ಮ ಜಾಕು. ತಿಂದರೆ ಹೊಟ್ಟೆ ತುಂಬ ಹುಳು ಬೀಳುತ್ತೆ" ಎಂದು ಗಡುಸಾಗಿಯೂ ನಯವಾಗಿಯೂ ಹೇಳುವಳು. ಮಗುವಿನ ಚೌಕನಾದ ಪುಟ್ಟ ಅಂಗೈಯಲ್ಲಿ ತುಸು ಸಕ್ಕರೆ ಇಡುವಳು. ಜಾಕು ಅದನ್ನು ಬಾಯಿಗೆ ಹಾಕಿ, ಕೈಯನ್ನೂ ಬಾಯನ್ನೂ ತಾಯಿಯ ಬೆನ್ನ ಸೆರಗಿಗೇ ಒರಿಸಿ ಬಿಡುವಳು. ಅಷ್ಟರಲ್ಲಿ ಸರಸಮ್ಮನು ಹಾಲು ಆರಿಸಿ ಆಗಿದ್ದರೆ ಮುಂದೆ ಬಂದು ಕೂತು ಹಾಲು ಕುಡಿಯುವಳು.

೦ ೦ ೦

ಈ ಸಲ ಜಾಕುವಿನ ಹುಟ್ಟಿದ ಹಬ್ಬವನ್ನು ಅದ್ದೂರಿಯಾಗಿ ಮಾಡಿದ್ದರು. ಸಕ್ಕರೆಯ ಪಾಕದಲ್ಲಿ ಕೊಬ್ಬರಿಯ ಚೂರನ್ನಿಟ್ಟು ಸರ ಪೋಣಿಸಿ ಹಾಕಿದ್ದರು. ಬುಟ್ಟಾ ಇಟ್ಟಿದ್ದ ಕಾಶಿ ಪೀತಾಂಬರದ ಕಣದಲ್ಲಿ ಫ್ರಾಕು ಹೊಲಿಸಿದ್ದರು. ಮುಂಗುರುಳುಗಳ ಪುಟ್ಟ ಜಡೆಗೊಂದು ಕೆಂಪಿನ ಜಡೇ ಬಿಲ್ಲೆಯನ್ನಿಟ್ಟಿದ್ದರು. ಮನೆ ತುಂಬ ಮುತ್ತೈದೆಯರು ಬಂದು ಆರತಿ ಬೆಳಗಿದ್ದರು. ಮಣೆಯ ಮೇಲೆ ಕೂರಿಸಿ ಹಾಡು ಹೇಳುತ್ತಿದ್ದರೆ ಜಾಕು ಇಂದ್ರಾಣಿಯಂತೆ ಶೋಭಿಸುತ್ತಿದ್ದಳು. ಆಗ ಯಾವ ಬರಡು ಬಂಜೆಯ ಹಾಳುಗಣ್ಣು ಮುದ್ದು ಮಗುವಿನ ಮೇಲೆ ಬಿದ್ದಿತೋ! ಮೂರನೇ ದಿನದಿಂದಲೇ ಮಗುವಿಗೆ ಮೈ ಬೆಚ್ಚಗಾಯಿತು. ಹಸುರು ಹಸುರಾಗಿ ವಾಂತಿ ಭೇದಿ ಆಯಿತು. ಕಿಸುರು ತೆಗೆಸಿದರು. ಚುಟಿಕೆ ಹಾಕಿದರು. ಮಂತ್ರಿಸಿದರು. ಯಂತ್ರ ಕಟ್ಟಿದರು. ಔಷಧಿಯೂ ಕುಡಿಸಿದರು. ಪೂಜೆ ಹಾಕಿಸಿದರು. ಬಂಡಿಯಂತಿದ್ದ ಮಗು ನಾಲ್ಕು ದಿನದಲ್ಲಿ ಕಡ್ಡಿಯ ಹಾಗಾಯ್ತು.

ಐದನೆಯ ದಿನವೋ ಏನೋ, ಜಾಕು ಹುಷಾರಾಯಿತು. ಎಂದಿನಂತೆ ಎದ್ದು ಓಡಾಡಿತು. ನೆರೆಮನೆ ಶೀನುವಿನ ಹತ್ತಿರ ಸರಸವಾಡಿತು. ಚೆನ್ನಾಗಿ ಹಾಲು ಕುಡಿಯುತ್ತಿತ್ತು — ದೊಡ್ಡ ಬೆಳ್ಳಿಯ ಬಟ್ಟಲಲ್ಲಿ ಎರಡು ಬಟ್ಟಲು ತುಂಬ ಕುಡಿಯಿತು. ತಂದೆ ರಾಜುವಿನ ಬಳಿ ಮೇಜಿನ ಮೇಲೆ ಕೂತು ಕಾಗದಗಳನ್ನೆಲ್ಲ ದಿಕ್ಕೆಸೆದು, ಮಸಿ ಚೆಲ್ಲಿ ಕೇಕೆ ಹಾಕಿತು. ಸರಸಮ್ಮನು ಕೂತಿದ್ದರೆ, ಹಿಂದೆ ನಿಂತು ತಲೆ ಕೆದರಿ ಮುಖ ಜಿವುಟ ಕೀಟಲೆ ಮಾಡಿತು.

ಅಂದು ರಾತ್ರಿ, ಜಾಕು ಇದ್ದಕ್ಕಿದ್ದಂತೆ ಚಿಟಾರೆಂದು ಚೀರಿತು. ತಾಯಿ ದಡದಡ ಓಡಿ ಬಂದು ಎತ್ತಿ ಮಲಗಿಸಿದಳು. ಅದರ ಮೈ ಸುಡು ತ್ತಿತ್ತು, ನಡುಗುತ್ತಿತ್ತು. ಸರಸಮ್ಮನು ಕೈ ಕೈ ಹಿಸುಕಿಕೊಂಡು ಅತ್ತಿತ್ತ ನೋಡಿದಳು. ನಡುಮನೆಯಲ್ಲಿ ಕೂತು ಓದುತ್ತಿದ್ದ ರಾಜುವನ್ನು ಸನ್ನೆ ಮಾಡಿ ಕರೆದಳು. ಇಬ್ಬರೂ ಜಾಕು ಮಲಗಿದ್ದ ರೂಮಿಗೆ ಬಂದರು. ರಾಜು ಅದರ ಮೈ ಮುಟ್ಟಿ ನೋಡಿ "ಡಾಕ್ಟರನ್ನು ಕರೆತರುತ್ತೇನೆ" ಅಂದ.

"ಬೇಡ ಇರಿ" ಎಂದಳು ಸರಸಮ್ಮ. ಇಬ್ಬರೂ ಮಗುವಿನ ಬಳಿ ಕೂತರು. ಸರಸಮ್ಮ ಅದನ್ನೆತ್ತಿ ತೊಡೆಯ ಮೇಲೆ ಮಲಗಿಸಿಕೊಂಡಳು. ರಾಜು ಅದರ ಮುಂಗುರುಳುಗಳನ್ನು ನೇವರಿಸುತ್ತ "ಜಾಕು, ಜಾಕು," ಎಂದ.

ಜಾಕು ಕಣ್ಣುಗಳನ್ನು ಅವನ ಕಡೆ ಹೊರಳಿಸಿತು. ನಿಧಾನವಾಗಿ, ತೆಳ್ಳಗೆ ಹೊರಳಿಸಿತು. ಆ ವೇಳೆಗೆ ಅದರ ಶಕ್ತಿಯೆಲ್ಲ ಕುಗ್ಗಿ ಕುಂದಿತ್ತು. ಕಳೆಯೆಲ್ಲ ಹೋಗಿತ್ತು.

ಕಡೆಯದಾಗಿ ಹೊರಳಿಸಿದ ಕಣ್ಣುಗಳು ಹಾಗೆಯೇ ಜೋಲು ಬಿದ್ದುವು. ಅವುಗಳ ಪ್ರತಿಭೆಯು ಅಳಿದು ಹೋಯಿತು. ಒಬ್ಬರಿಗೂ ತಿಳಿಯದಂತೆ ಅಳಿದು ಹೋಯಿತು.



# ನೆಟ್ಟದೃಷ್ಟಿ

ರುದ್ರನಿಗೆ ಸಹಜವಾಗಿಯೇ ರುದ್ರಗಣ್ಣು. ಹೊಳೆಯುತ್ತಿದ್ದ ಬೊಗಸೆ ಗಣ್ಣು. ಅವನು ನಕ್ಕಾಗ ಅದು ರಮ್ಯವಾಗಿರುತ್ತಿತ್ತು. ಅವನು ಕೋಪಿಸಿ ಕೊಂಡರೆ ಅದು ಸಿಡಿಯನ್ನು ಕಾರುವಷ್ಟು ಉಗ್ರವಾಗಿರುವುದು. ಅವನು ಶಾಂತವಾಗಿದ್ದಾಗ ಅದೂ ಸಹ ಮಂದವಾಗಿರುವುದು. ಅವನ ಮುಖಕ್ಕೆ ಕಣ್ಣುಗಳೇ ಅಂದ. ಮೃಗಾಲಯದಲ್ಲಿ ಅವನಿಗೆ ಕಸ ಹೊಡೆಯುವ ಚಾಕರಿ. ಮೃಗಗಳನ್ನು ನೋಡ ಬಂದವರಿಗೆ ಅದೂ ಇದನ್ನು ತೋರಿ ಸುತ್ತ ಹೇರಳವಾಗಿ ಹಣ ಸಂಪಾದಿಸುತ್ತಿದ್ದ. ಮೌನವಾಗಿ ಮಲಗಿರುವ ಹುಲಿಯ ಮೇಲೆ ಹುಲ್ಲು ಕಡ್ಡಿಯನ್ನು ಹಾಕಿ ಅದಕ್ಕೆ ಸಿಟ್ಟು ಬರಿಸುವನು. ನಿದ್ದೆ ಮಾಡುತ್ತಿದ್ದ ಮುಳ್ಳು ಹಂದಿಯನ್ನು ಕೆಣಕಿ ಅದರ ಮುಳ್ಳನ್ನು ಹರ ಡಿಸುವನು. ನವಿಲಿನೆದುರಿಗೆ ಹಾಡು ಹಾಡುತ್ತ ಕುಣಿದಾಡಿ ಅದು ತನ್ನ ಗರಿಗಳನ್ನು ಅಂದವಾಗಿ ಪಸರಿಸುವಂತೆ ಮಾಡುತ್ತಿದ್ದ. ಆ ಮೇಲೆ ಹಾವು ಗಳಿರುವ ಪಂಜರದೊಳಗೆ ಹೋಗಿ ಮಲಗಿರುವ ಹಾವುಗಳನ್ನೆಬ್ಬಿಸುವನು. ಬುಸುಗುಟ್ಟುತ್ತ ಅವು ಬಂದಾಗ ನೆಟ್ಟದೃಷ್ಟಿಯಿಂದ ಅವುಗಳನ್ನು ವಶೀಕರಿಸಿ ಅವುಗಳ ಹೆಡೆಯ ಮೇಲೆ ಕೈಯಾಡಿಸುವನು. ಒಂದು ಹಾವು ಅವನ ಕೈ ಮೇಲೆ ಸುತ್ತಿಕೊಳ್ಳುವುದು, ಇನ್ನೊಂದು ಅವನ ಮೈ ಮೇಲೆ ಸುತ್ತಿಕೊಳ್ಳು ವುದು, ಮತ್ತೊಂದು ಅವನ ಕಾಲ ಸುತ್ತ ಸುಳಿದಾಡುವುದು. ಎಲ್ಲ ವನ್ನೂ ಅವನು ವಶೀಕರಣ ಮಾಡಿದ್ದ. ಅವು ಅವನನ್ನು ಇಷ್ಟಾದರೂ ಕಚ್ಚುತ್ತಿರಲಿಲ್ಲ.

ಎಲ್ಲಕ್ಕಿಂತ ಸಿಂಹದ ಬಳಿ ಅವನಿಗೆ ಚೆಲ್ಲಾಟ. ಅದನ್ನು ಬಹಳವಾಗಿ ಆಟವಾಡಿಸುತ್ತಿದ್ದ. ಅದು ಮೂರು ವರ್ಷದ ಮರಿ. ಎರಡು ಸುತ್ತಿನ ಪಂಜರದಲ್ಲಿಟ್ಟಿದ್ದರು. ಹೊರಗಿನ ಪಂಜರದ ಸುತ್ತು ಜನಗಳು ನಿಂತು ಕೊಳ್ಳುವರು. ಒಳ ಪಂಜರದಲ್ಲಿ ರುದ್ರಣ್ಣ ನಿಂತುಕೊಳ್ಳುವನು. ಸಿಂಹದ ಮೇಲೆ ಚಿಕ್ಕ ಚಿಕ್ಕ ಕಲ್ಲುಗಳನ್ನೆಸೆಯುವನು. ಅದು ಘರ್ಜಿಸಿದರೆ ತಾನೂ ಘರ್ಜಿಸುವನು. ಅದು ದಿಟ್ಟಿಸಿ ನೋಡಿದರೆ ತಾನೂ ದಿಟ್ಟಿಸಿ ನೋಡು

ವನು. ಅದು ಅತ್ತಿತ್ತ ಸುಳಿದಾಡುವಾಗ ಉದ್ದವಾದ ಕೋಲಿನಿಂದ ಅದನ್ನು ಹೊಡೆಯುವನು. ಅದು ನೆಗೆದು ಬಂದು ಪಂಜರದ ಸಲಾಕೆಗಳನ್ನು ಮುಂಗಾಲಿನಿಂದ ಹಿಡಿದು ನಿಂತುಕೊಳ್ಳುವುದು. ಆಗ ರುದ್ರಣ್ಣ ಕೆಳಗೆ ಬಾಗಿ ಪಂಜರದ ಸಂದಿಯಲ್ಲಿ ಕೈತೂರಿ ಅದರ ಹಿಂಗಾಲುಗಳನ್ನು ಪರಚುವನು.

ಮೃಗಗಳನ್ನು ಹೀಗೆ ಆಡಿಸುವುದರಿಂದ ರುದ್ರಣ್ಣನಿಗೆ ಒಂದಿಷ್ಟು ಪುಡಿಗಾಸು ಸಿಗುತ್ತಿತ್ತು. ದಿನ ದಿನವೂ ಮೂರು ರೂಪಾಯಿ ನಾಲ್ಕು ರೂಪಾಯಿ ದೊರೆಯುತ್ತಿತ್ತು. ಅವನ ತಾಯಿಗೆ ಅವನನ್ನು ಕಂಡರೆ ಬಲು ಹಿಗ್ಗು. ಅವನು ಕೆಲಸಕ್ಕೆ ಸೇರಿದಾರಭ್ಯ ಈವರೆಗೆ ಕೂಡಿಟ್ಟ ಹಣದಿಂದ ಒಂದು ಮನೆ ಕೊಂಡುಕೊಂಡಿದ್ದಳು. ಆಗ ತಾನೇ ಮನೆಗೆ ಬಂದಿದ್ದ ಅವನ ಹೆಂಡತಿಗೆ ಮೈ ತುಂಬ ಒಡವೆಗಳನ್ನು ಮಾಡಿಸಿದ್ದಳು. ಹೆಂಡತಿಯ ಹೆಸರು ಗೌರಿ. ಗೌರಿಗೆ ಆಗಾಗ ತನ್ನ ಗಂಡನು ಮೃಗಾಲಯದಲ್ಲಿ ಝಾಡಮಾಲಿಯ ಕೆಲಸ ಮಾಡುತ್ತಾನಲ್ಲ ಎಂದು ಮನದಲ್ಲಿ ಚಿವುಟುತ್ತಿತ್ತು. ಆದರೇನಂತೆ, ಕೈ ತುಂಬ ಹಣ ಬರುತ್ತಲ್ಲ, ತನ್ನ ಮೈ ತುಂಬ ಒಡವೆ ಮಾಡಿಸಿಕೊಟ್ಟಿದ್ದಾನಲ್ಲ, ಎಂದು ಸಮಾಧಾನಪಟ್ಟುಕೊಳ್ಳುವಳು. ಸಂಪಾದನೆ ಎಷ್ಟು ಬಂದರೇನು? ಝಾಡಮಾಲಿ ಝಾಡಮಾಲಿ ತಾನೇ? ಆಕೆ ಒಡವೆಗಳನ್ನಿಟ್ಟುಕೊಂಡು ಬೀದಿಯಲ್ಲಿ ಹೋಗುತ್ತಿದ್ದರೆ ನೋಡಿದವರು ಕೈ ತೋರಿಸಿ ಹೇಳಿಕೊಳ್ಳುತ್ತಿದ್ದರು, "ಕಸಹೊಡೆವವನ ಹೆಂಡ್ತಿ ನೋಡಪ್ಪ ಎಷ್ಟು ದಿಮಾಕ್‌ನಿಂದಿದಾಳೆ!" ಎಂತ. ಕಸಬಿನ ಗೌರವ ಜನಕ್ಕೇನು ಗೊತ್ತು? ರುದ್ರಣ್ಣ ಪುಟ್ಟದಾಗಿ ಬೀಡಿಸಿಗರೇಟಿನ ಅಂಗಡಿಯಾದರೂ ಇಟ್ಟಿದ್ದರೆ ಮರ್ಯಾದೆಯಾಗಿರುತ್ತಿತ್ತು. ಆಗ ಗೌರಿ ಒಬ್ಬ ವ್ಯಾಪಾರಿಯ ಹೆಂಡತಿ. ಇದೇ ಒಡವೆಗಳನ್ನು ಆಗ ತೊಟ್ಟುಕೊಂಡು ಹೋದರೆ ಬೀದಿಯ ಜನರೆಲ್ಲ ಖಂಡಿತವಾಗಿಯೂ ಮರ್ಯಾದೆ ಮಾಡುವರು. "ಅವಳಿಗೇನು ಕಡಿಮೆ? ದೊಡ್ಡ ವ್ಯಾಪಾರಿಯ ಹೆಂಡತಿ!" ಎಂದು ಮುಂತಾಗಿ ಹೊಗಳುವರು.

ಇದು ಕಸುಬಿನ ವ್ಯತ್ಯಾಸ. ರುದ್ರಣ್ಣನಿಗೂ ಈ ವ್ಯತ್ಯಾಸ ಆಗಾಗ ತೋರುತ್ತಿತ್ತು. ಗೌರವವಿಲ್ಲದ ಈ ಉದ್ಯೋಗವನ್ನು ಇನ್ನು ಸಾಕುಮಾ

ಡಬೇಕೆಂದು ಅವನಿಗನ್ನಿಸುತ್ತಿತ್ತು. ವಾಸಕ್ಕೆ ಸ್ವಂತಮನೆ ಮಾಡಿಕೊಂಡಿದ್ದ. ಹೆಂಡತಿಗೆ ಮೈತುಂಬ ಒಡವೆಗಳನ್ನು ಮಾಡಿಸಿದ್ದ. ರೊಕ್ಕವಾಗಿ ಅಷ್ಟು ಹಣವನ್ನು ಕೂಡಿಸಿಟ್ಟಿದ್ದ. ಎಲ್ಲಿಯಾದರೂ ಚಿಕ್ಕ ಅಂಗಡಿಯನ್ನು ಬಾಡಿಗೆಗೆ ತೆಗೆದುಕೊಡು, ಚಿಕ್ಕ ಜವಳಿ ಅಂಗಡಿಯನ್ನಿಟ್ಟರೆ ಸುಖವಾಗಿ ವ್ಯಾಪಾರ ನಡೆಸಬಹುದು, ಚೆನ್ನಾಗಿ ಲಾಭ ಸಂಪಾದಿಸಬಹುದು. ಈ ಯುದ್ಧ ಇನ್ನೂ ಮುಗಿಯುವುದಿಲ್ಲವೆನ್ನುತ್ತಾರೆ. ಸರಕಿನ ಬೆಲೆ ಇನ್ನೂ ಏರಿಹೋಗುವುದಂತೆ. ಈಗಲೇ ಸರಕನ್ನು ಶೇಖರಿಸಿಟ್ಟುಕೊಂಡರೆ ಬೆಲೆ ಏರಿದಷ್ಟು ಲಾಭವನ್ನು ಚೆನ್ನಾಗಿ ಸಂಪಾದಿಸಬಹುದು. ಈ ಝಾಡಮಾಲೀ ಕೆಲಸ ಎಂದಿದ್ದರೂ ನಿಕೃಷ್ಟವಾದುದೇ !

ರುದ್ರಣ್ಣನ ತಾಯಿಯು ಇದೇ ರೀತಿ ನೆನೆಯುತ್ತಿದ್ದಳು. ಮಗನು ದಿನದಿನವೂ ರೊಕ್ಕವನ್ನು ತಂದು ಅವಳ ಕೈಯಲ್ಲಿ ಕೊಡುತ್ತಿದ್ದ. ಒಂಭತ್ತುನೂರ ಮುವತ್ತೈದು ರೂಪಾಯಿ ಏಳಾಣೆ ಐದುಕಾಸು ಥೈಲಿಯಲ್ಲಿ ಶೇಖರವಾಗಿತ್ತು. ಒಂದು ಸಾವಿರಕ್ಕೆ ಅರವತ್ತನಾಲ್ಕುರೂಪಾಯಿ ಎಂಟಾಣೆ ಏಳು ಕಾಸು ಮಾತ್ರ ಬಾಕಿ. ಒಂದು ಸಾವಿರ ಸೇರಿದಮೇಲೆ ಮಗನಿಗೆ ಈ ಕೆಲಸ ಬಿಡಿಸಿಬಿಟ್ಟು ವ್ಯಾಪಾರಕ್ಕೆ ತೊಡಗಬೇಕೆಂದು,ಆಕೆ ನಿರ್ಷ್ಕರ್ಷೆಮಾಡಿಬಿಟ್ಟಳು. ಈ ಯುದ್ಧಕಾಲದಲ್ಲಿ ಹಣವಿಲ್ಲದ ನಿರ್ಗತಿಕರೆಷ್ಟೋಮಂದಿ ಹಣವಂತರಾಗಿದ್ದರು. ಒಂದಕ್ಕೆ ಹತ್ತರಷ್ಟು ಬೆಲೆ ಏರುತ್ತಿರುವಾಗ ವ್ಯಾಪಾರಿಯು ಮುಟ್ಟಿದ್ದೆಲ್ಲ ಚಿನ್ನವಾಗದೇನು ? ಖಂಡಿತವಾಗಿ ರುದ್ರಣ್ಣನನ್ನು ಈ ಕೆಲಸದಿಂದ ಬಿಡಿಸಿಬಿಡಬೇಕು.

ಆ ರಾತ್ರಿ ದೀಪದಮುಂದೆ ಕೂತು ಆಕೆ ಹತ್ತನೆಯ ಸಲ ಹಣವನ್ನೆಣಿಸುತ್ತಿರುವಾಗ ರುದ್ರಣ್ಣ ಬಂದ. "ಅವ್ವ, ಥೈಲಿಯಲ್ಲಿ ಏಸು ರೊಕ್ಕ ಅದೆ ನೋಡು. ಈ ಕೆಲಸ ಬುಟ್ಬುಟ್ಟು ಯಾಪಾರ ಮಾಡಬೇಕಂತಿನ್ನಿ "

"ಅರವತ್ತನಾಲ್ಕು ರೂಪಾಯಿ ಎಂಟಾಣೆ ಏಳು ಪೈ ಬಿದ್ದರ ಒಂದು ಸಾವಿರ ರೂಪಾಯಿ ಆಗ್ತದೆ ಕಣಯ್ಯ. ಸಾವಿರ ರೂಪಾಯಿ ಮಾಡಿಟ್ಬುಟ್ಟು ಯಾಪಾರಕ್ಕೆ ತೊಡಗೋವಂತೆ. ನಾನೂ ನಿಂಗೆ ಹೇಳೋಣಾಂತಿದ್ದೆ."

"ಕೋ. ಈ ದಿವಸ ನಾಲ್ಕು ರೂಪಾಯಿ ಆರಾಣೆ ಬಂದೈತೆ. ಚಿಲ್ಲರೆ ಬಿಡತ್ತ. ಬಾಕಿ ಅರವತ್ತು ರೂಪಾಯಿ ಹತ್ತಿಪ್ಪತ್ತು ದಿನಕ್ಕೆ ಸೇರಿ ಬಿಡ್ತೈತೆ.

ಆ ಮೇಲೆ ಈ ಗಬ್ಬು ಉದ್ಯೋಗ ಬುಟ್ಬುಡೋಣ. ನೆರೆಮನೆ ನಂಜಣ್ಣನ್ನ ಕೇಳಿ ಒಂದು ಚಿಕ್ಕ ಅಂಗಡಿ ನೋಡ್ಕೋಕ್ಬೇಳು, ಏಳೆಂಟು ರೂಪಾಯಿ ಒಳಗೆ."

o o o

ರುದ್ರಣ್ಣನ ಥೈಲಿಯಲ್ಲಿ ಸಾವಿರ ರೂಪಾಯಿ ತುಂಬಲಿಕ್ಕೆ ಎರಡೇ ಎರಡು ರೂಪಾಯಿ ಬಾಕಿ. ಎರಡು ರೂಪಾಯನ್ನು ಒಂದು ದಿನದಲ್ಲಿ ಸಂಪಾದಿಸಿಬಿಡಬಹುದು. ಆದ್ದರಿಂದ ಅದು ಅವನ ಕಡೆಯದಿನ. ಮೃಗದ ಪಂಜರಗಳನ್ನೆಲ್ಲ ಉಲ್ಲಾಸದಿಂದ ಕಸಹೊಡೆದ. ಹದಿನೈದು ವರ್ಷಗಳು ಮೃಗಾಲಯದಲ್ಲಿ ಕೆಲಸ ಮಾಡಿದ್ದ. ಹುಲಿ, ಕರಡಿ, ಚಿರತೆ, ಹಂದಿ, ನರಿ, ನವಿಲು, ಹಾವು, ಹೆಗ್ಗಣ, ಜಿಂಕೆ, ಜಿರಾಫೆ—ಎಲ್ಲವೂ ಅವನ ನಚ್ಚಿನ ಗೆಳೆಯರಾಗಿದ್ದುವು. ಅವುಗಳ ಬಳಿ ಹೋದಾಗಲೆಲ್ಲ ಇವನನ್ನು ಪ್ರೀತಿ ಪುರಸ್ಸರವಾಗಿ ನೋಡುತ್ತಿದ್ದುವು. ಹತ್ತಿರಕ್ಕೆ ಹೋದಾಗ ಅವನ ಹೆಗಲಮೇಲೆ ತಮ್ಮ ಮುಂಗಾಲುಗಳನ್ನಿಟ್ಟು ಮುಖಕ್ಕೆ ಮುಖವನ್ನು ತಿಕ್ಕುತ್ತಿದ್ದುವು. ಅನಂತರ ಅವನು ಅವುಗಳನ್ನು ಮುದ್ದಾಡಿ ಕೆಳಗೆ ಬಿಡುತ್ತಿದ್ದ.

ಈ ದಿನ ಅವುಗಳೆಲ್ಲವನ್ನೂ ಕಡೆಯ ಸಲ ಮುದ್ದಾಡಿ ಮೈತಡವಿ ಕೆಳಗೆ ಬಿಟ್ಟ. ಅವನ ಕಣ್ಣಲ್ಲಿ ನೀರು ಬಂತು. ಅವು ದುಃಖದಿಂದ ಪ್ರಲಾಪಿಸುವಂತೆ ಮೈ ಸೊರಗಿಕೊಂಡವು.

ರುದ್ರಣ್ಣ ಕಡೆಯದಾಗಿ ಸಿಂಹದ ಪಂಜರದಲ್ಲಿ, ಕಸ ಹೊಡೆಯಲು ಬಂದ. ಅಲ್ಲಿ ಬಲು ಹುಷಾರಾಗಿ ಶುದ್ಧಮಾಡಬೇಕಾಗಿತ್ತು. ಹೊರ ಪಂಜರಕ್ಕೂ ಒಳ ಪಂಜರಕ್ಕೂ ಸೇರಿಕೊಂಡಂತೆ ಒಂದೇ ಪಕ್ಕದಲ್ಲಿ ಬಾಗಿಲುಗಳಿದ್ದವು. ಎರಡಕ್ಕೂ ನಡುವೆ ಇದ್ದ ಜಾಗದಲ್ಲಿ ಅಡ್ಡಬಾಗಿಲುಗಳನ್ನು ಮಾಡಿಟ್ಟಿದ್ದರು. ಹೊರಗಿನ ಪಂಜರದಲ್ಲಿ ಮೊದಲು ಕಸ ಹೊಡೆದು ಅಡ್ಡಬಾಗಿಲೆರಡನ್ನು ತೆಗೆದಿಟ್ಟು, ರುದ್ರಣ್ಣ ಹೊರಕ್ಕೆ ಬಂದು, ಕದವನ್ನು ಇಳಿಯ ಬಿಡುವ. ಅನಂತರ ಕೋಲಿನಿಂದ ಒಳ ಪಂಜರದ ಕದವನ್ನು ಮೇಲಕ್ಕೆ ತೆರೆಯುವನು. ಸಿಂಹವು ಈಚೆಗೆ ಬಂದು ಹೊರಪಂಜರದಲ್ಲಿ ಓಡಾಡುವುದು. ರುದ್ರಣ್ಣ ಆ ಕಡೆ ಈ ಕಡೆ ಇದ್ದ ಬಾಗಿಲುಗಳನ್ನು ಕೋಲಿನಿಂದಲೇ ಇಳಿಯಬಿಟ್ಟು ಹೊರಪಂಜರದ ಕದವನ್ನು ತೆಗೆದುಕೊಂಡು ಒಳ

ಪಂಜರಕ್ಕೆ ಪ್ರವೇಶಿಸುವನು. ಕಸ ಹೊಡೆದು ಶುದ್ಧಮಾಡಿ ಹೊರಕ್ಕೆ ಬಂದನಂತರ ಮತ್ತೆ ಹೊರಬಾಗಿಲನ್ನು ಮುಚ್ಚಿ ಅಡ್ಡ ಬಾಗಿಲುಗಳನ್ನು ತೆರೆದು ಸಿಂಹವನ್ನು ಒಳಪಂಜರಕ್ಕಟ್ಟುತ್ತಿದ್ದ.

ಇದು ಅವನು ದಿನವೂ ಮಾಡುವ ಪದ್ಧತಿ. ಈ ದಿನ ಕಡೆಯ ದಿನ ತಾನು ಮುಂದೆ ವ್ಯಾಪಾರಮಾಡುವ ಹವಣಿಕೆಯಲ್ಲಿ ಅವನು ಹಗಲು ಗನಸು ಕಾಣುತ್ತಿದ್ದ. ಹೊರಪಂಜರದಲ್ಲಿ ಕಸ ಹೊಡೆದು ಹೊರಕ್ಕೆ ಬಂದ. ಬಾಗಿಲು ಹಾಕಿದ. ಒಳಪಂಜರದ ಬಾಗಿಲನ್ನು ತೆಗೆದೊಡನೆ ಸಿಂಹವು ಈಚೆಗೆ ಬಂದು ಹೊರಪಂಜರಕ್ಕೆ ಹೋಯಿತು. ಆಗ ಅಡ್ಡ ಬಾಗಿಲುಗಳನ್ನು ಹಾಕುವುದು ಮರೆತು ಬಿಟ್ಟ. ಒಳಪಂಜರಕ್ಕೆ ಬಂದು ಕಸ ಗುಡಿಸುತ್ತಿದ್ದ. ಇದನ್ನೇ ಹೊಂಚು ನೋಡುತ್ತಿದ್ದ ಸಿಂಹವು ಸರಕ್ಕನೆ ನೆಗೆದು ಬಂದು ಒಳ ಪಂಜರದ ಬಾಗಿಲಿಗೆ ಅಡ್ಡವಾಗಿ ನಿಂತುಕೊಂಡಿತು. ರುದ್ರಣ್ಣ ಕಸ ಹೊಡೆಯುವುದನ್ನು ನಿಲ್ಲಿಸಿ ತಲೆಯೆತ್ತಿನೋಡಿದ. 'ಅಯ್ಯೋ' ಎನ್ನುತ್ತ ಸ್ತಂಭದಂತೆ ಕಂಬಿಗಳಿಗೊರಗಿ ನಿಂತ. ಕೈಗಳೆರಡನ್ನೂ ಅಗಲವಾಗಿ ತೆರೆದು ಕಂಬಿಗಳನ್ನು ಹಿಡಿದುಕೊಂಡು ಸಿಂಹವನ್ನು ಎವೆಯಿಕ್ಕದೆ ನೋಡುತ್ತ ನಿಂತ. ಸಿಂಹವೂ ಇವನನ್ನೇ ನೋಡುತ್ತ ನಿಂತಿತು. ಕಾಲುಘಂಟೆ, ಅರ್ಧಘಂಟೆ, ಒಂದು ಘಂಟೆ, ಎರಡುಘಂಟೆ. ರುದ್ರಣ್ಣ ಕಣ್ಣಾಲಿಗಳನ್ನು ಅಲ್ಲಾಡಿಸದೆ ಹಾಗೆಯೇ ನಿಂತೆ. ಸಿಂಹವು ನೆಟ್ಟದೃಷ್ಟಿಯನ್ನು ಕದಲಿಸದೆ ಹಾಗೆಯೇ ನಿಂತಿತು. ಇಬ್ಬರದೂ ಏಕಾಗ್ರದೃಷ್ಟಿ. ಸಿಂಹವು ತುಸ ಕದಲಿ ದರೆ ಸಾಕು. ಸರ್ರನೆ ನೆಗೆದು ಒಳಪಂಜರದ ಕದವನ್ನು ಹಾಕಿಕೊಂಡು ಬಿಡಬಹುದೆಂದು ರುದ್ರಣ್ಣನ ಯೋಚನೆ. ರುದ್ರಣ್ಣ ಒಂದುಸಲ ಕಣ್ಣು ಮಿಟುಕಿಸಿದರೆ ಸಾಕು, ಅವನ ಮೇಲೆ ನೆಗೆದು ಸೀಳಿ ನುಂಗಿ ಹಾಕಬೇಕೆಂದು ಸಿಂಹದ ಹವಣಿಕೆ. ಒಬ್ಬರಿಗೆ ಇನ್ನೊಬ್ಬರನ್ನು ಕಂಡರೆ ಭಯ. ಇಬ್ಬರೂ ಪ್ರಬಲರು. ಶಾಂತತೆ, ಸಿಟ್ಟು, ಕ್ರೋಧ, ಇಬ್ಬರ ಕಣ್ಣುಗಳಲ್ಲಿಯೂ ತೋರಿಬರುತ್ತಿತ್ತು. ಸಿಡುಕಾಗಲೀ ಅಧೈರ್ಯವಾಗಲೀ ಇಬ್ಬರಲ್ಲೂ ಇಲ್ಲ. ಸ್ತಂಭದಂತೆ ಅವನು ನಿಂತಿದ್ದ. ಪ್ರತಿಮೆಯಂತೆ ಅದೂ ನಿಂತಿತ್ತು.

ಈ ಅದ್ಭುತವನ್ನು ನೋಡಲು ಪಂಜರದ ಸುತ್ತು ಜನಗಳು ನೆರೆದರು. ಹೊರಪಂಜರದ ಕದವನ್ನು ಯಾರೋ ಮೆಲ್ಲನೆ ಮುಚ್ಚಿದರು. ಕಾವಲು

ಗಾರನು ಓಡಿಹೋಗಿ ಮುಖ್ಯಾಧಿಕಾರಿಗೆ ತಿಳಿಸಿದನು. ಸಿಂಹವನ್ನು ಗುಂಡು ಹೊಡೆದು ಕೊಂದು ಹಾಕಿ ರುದ್ರಣ್ಣನನ್ನು ಬದುಕಿಸಬೇಕೆಂದು ಬೇಡಿಕೊಂಡನು. ಅವರು ಆಗತಾನೇ ಕ್ಷೌರಕ್ಕೆ ಕೂತಿದ್ದರು.

"ರುದ್ರಣ್ಣ ಸಿಂಹದ ಬೋನಿನಲ್ಲಿ ಸಿಕ್ಕಿಕೊಂಡಿದಾನೆ ಸ್ವಾಮಿ" ಎಂದು ಕೂಗುತ್ತ ಬಂದಿದ್ದನ್ನು ಕೇಳಿ ಗಾಬರಿಗೊಂಡ ಅಧಿಕಾರಿಗಳು ಸರಕ್ಕನೆ ಮುಖವನ್ನತ್ತ ತಿರುಗಿಸಿದರು. ಕ್ಷೌರಿಕನ ಕತ್ತಿಯು ಗಡ್ಡವನ್ನು ಘಾಯ ಮಾಡಿತು. ದಳದಳನೆ ರಕ್ತ ಸುರಿಯಿತು. ಅಧಿಕಾರಿಗಳಿಗೆ ಕ್ಷೌರಿಕನ ಮೇಲೆ ಕೋಪ, ಮೃಗಾಲಯದ ಕಾವಲುಗಾರದ ಮೇಲೆ ಕೋಪ, ರುದ್ರಣ್ಣನ ಮೇಲೆ ಕೋಪ, ಎಲ್ಲಾ ಕೋಪವೂ ಒಟ್ಟಾಗಿ ಸೇರಿಬಿಟ್ಟಿತು.

"ಸಿಕ್ಕಿಕೊಂಡರೆ ಏನು ಮಾಡಬೇಕಂತಿಯೋ ಬಡ್ಡೀ ಹೈದ ? ಸಮಾಚಾರ ಹೇಳೋಕೆ ವೇಳೆ ಸಮಯ ಒಂದೂ ಇಲ್ಲವೆ ?"

"ತಪ್ಪಾಯ್ತು ಬುದ್ಧಿ. ಅವನ ಜೀವ ಈ ವೇಳೆಗೆ ಹೋಗಿಬಿಟ್ಟಿದೆಯೋ ಏನೋ ಅಂತ ಓಡೋಡಿ ಬಂದೆ. ರಾಯರೇನಾದ್ರು ಮನಸ್ಸು ಮಾಡಿದರೆ ಅವನ್ ಜೀವ ಉಳಿದರೂ ಉಳಿದಾತೂಂತ........

"ಸರಿ ಸರಿ. ಮೂರು ಸಾವಿರ ರೂಪಾಯಿ ಕೊಟ್ಟು ತಂದಿರೋ ಸಿಂಹಾನ ಹೊಡೆದು ಹಾಕಬೇಕೂಂತೀಯೇನು ? ಝಾಡಮಾಲಿ ಹೋದರೆ ಇನ್ನೊಬ್ಬ ಝಾಡಮಾಲಿ ಬರ್ತಾನೆ. ಸಿಂಹ ಹೋದರೆ ಇನ್ನೊಂದು ಸಿಂಹ ಎಲ್ಲಿಂದಲೋ ತರಲಿ ? ಹೋಗು ಹೋಗು. ಅವನ ಅಜಾಗರೂಕತೆಗೆ ಯಾರು ಕಾರಣಕರ್ತರು ? ಏನಾದರೂ ಉಪಾಯಮಾಡಿ ಸಿಂಹಾನ ಹೊರಗಿನ ಪಂಜರಕ್ಕೆಳೆದು ಬಾಗಿಲು ಹಾಕು, ಓಡು."

ಕಾವಲುಗಾರ ಬೇಗನೆ ಹಿಂತಿರುಗಿ ಮೃಗಾಲಯಕ್ಕೆ ಬಂದ. ಸಿಂಹವು ಹಾಗೆಯೇ ನಿಂತಿತ್ತು. ರುದ್ರಣ್ಣನೂ ಹಾಗೆಯೇ ನಿಂತಿದ್ದ. ಕಾವಲುಗಾರ ಒಂದು ಆಡನ್ನು ತರಿಸಿ ಅದಕ್ಕೆ ಹಗ್ಗವನ್ನು ಕಟ್ಟಿದ. ಆಡನ್ನು ಹೆಗಲ ಮೇಲೆ ಹೊತ್ತುಕೊಂಡು ಪಂಜರದ ಮೇಲಕ್ಕೆ ನಿಚ್ಚಣಿಗೆಯಿಂದ ಹತ್ತಿದ. ಅಲ್ಲಿಂದ್ಕೆಳಕ್ಕೆ ಆಡನ್ನು ಮೆಲ್ಲ ಮೆಲ್ಲನೆ ಇಳಿಯಬಿಟ್ಟ. ಸಿಂಹಕ್ಕೆ ಎದುರಾಗಿ ಇಳಿಯಬಿಟ್ಟ. ಅದು ಆಡಿನ ಮೇಲಾದರೂ ಬಿದ್ದು ತಿನ್ನುತ್ತಿರುವಾಗ ರುದ್ರಣ್ಣ ಹೇಗಾದರೂ ತಪ್ಪಿಸಿಕೊಂಡು ಬಿಡುತ್ತಾನೆಂದು ಕಾವಲುಗಾರನ

ಎಣಿಕೆ. ಆದರೆ ಅವನ ಎಣಿಕೆ ಫಲಿಸಲಿಲ್ಲ. ರುದ್ರಣ್ಣನ ಮೇಲೆ ನೆಟ್ಟ ಸಿಂಹದ ದೃಷ್ಟಿ ಚಲಿಸಲಿಲ್ಲ. ಅಡಲ್ಲ, ಇನ್ನೊಬ್ಬ ಮನುಷ್ಯನನ್ನೇ ಅಲ್ಲಿ ನಿಲ್ಲಿಸಿದ್ದರೂ ಅದರ ದೃಷ್ಟಿ ಚಲಿಸುವಹಾಗಿರಲಿಲ್ಲ. ಪಂಜರದ ಹೊರಗಿನಿಂದ ಒಬ್ಬಿಬ್ಬರು ಉದ್ದನಾದ ಕೋಲು ತೆಗೆದುಕೊಂಡು ಸಿಂಹವನ್ನು ಹಾಗೆ ಹೀಗೆ ಕೆಣಕಿಸಿದರು. ಅದಕ್ಕೆ ಲಕ್ಷ್ಯವೇ ಇಲ್ಲ. ರುದ್ರಣ್ಣ ತನ್ನನ್ನು ಹೇಗೆ ನೋಡುತ್ತಿದ್ದನೋ ತಾನೂ ಅವನನ್ನು ಹಾಗೆಯೇ ಸ್ಥಿರ ದೃಷ್ಟಿಯಿಂದ ನೋಡುತ್ತಿತ್ತು.

ಮಧ್ಯಾಹ್ನವಾಯಿತು. ಅಪರಾಹ್ನವಾಯಿತು. ಸಂಜೆಯಾಯಿತು. ರುದ್ರಣ್ಣನೂ ಕದಲಲಿಲ್ಲ; ಸಿಂಹವೂ ಕದಲಲಿಲ್ಲ. ಸಿಂಹವು ತನ್ನ ಬಲ್ಲವನ್ನೆಲ್ಲ ಕಣ್ಣುಗಳಲ್ಲಡಗಿಸಿಕೊಂಡು ವೈರಿಯನ್ನು ನೋಡುತ್ತಿತ್ತು. ರುದ್ರಣ್ಣ ತನ್ನ ಜೀವವನ್ನೆಲ್ಲ ಕಣ್ಣುಗಳಲ್ಲಡಗಿಸಿಕೊಂಡು: ಸಿಂಹವನ್ನು ನೋಡುತ್ತಿದ್ದ. ನೆಂಟರು ಬಂದರು, ಇಷ್ಟರು ಬಂದರು. ತಾಯಿಯೂ ಹೆಂಡತಿಯೂ ಗೊಳೋ ಎಂದು ಅಳುತ್ತ ಎದೆಯನ್ನು ಬಡಿದುಕೊಳ್ಳುತ್ತ ಬಂದರು.

ಸಂಜೆ ಮುಗಿದು ಮಸಕು ಮಸಕಾಗಿ ಕತ್ತಲಾಯಿತು. ರುದ್ರಣ್ಣನನ್ನು ಬದುಕಿಸುವ ಬಗೆ ಯಾರಿಗೂ ತೋರಲಿಲ್ಲ. ಅಧಿಕಾರಿಗಳಂತೂ ಸಿಂಹವನ್ನು ಕೊಲ್ಲುವುದಕ್ಕಾಗುವುದಿಲ್ಲೆಂದು ಖಂಡಿತವಾಗಿ ಹೇಳಿ ಕಳುಹಿಸಿಬಿಟ್ಟರು. ಗೌರಿ ತಡೆಯಲಾರದ ದುಃಖದಿಂದ ಗಟ್ಟಿಯಾಗಿ ಅತ್ತಳು. ನಿಷ್ಕರುಣಿಯಾದ ಅಧಿಕಾರಿಯನ್ನು ಸಿಕ್ಕಹಾಗೆ ಬಯ್ದಳು. ರುದ್ರಣ್ಣನಿಗದು ಕೇಳಿಸಿತು. ತನ್ನ ವಿಧಿ ಹೀಗೆ ಮುಗಿಯಬೇಕೆಂದಿರುವಾಗ ಅಧಿಕಾರಿಯನ್ನೇಕೆ ಬಯ್ಯಬೇಕೆಂದು ಅವನು ಮರುಗಿದ. ಪೂರ್ವಜನ್ಮದಲ್ಲಿ ತಾನು ಎಷ್ಟುಮಂದಿ ಯುವಕರನ್ನು ಕೊಂದುಹಾಕಿ, ಎಷ್ಟುಮಂದಿ ತುಂಬು ಯವ್ವನೆಯರ ಮನಸ್ಸನ್ನು ಒಡೆದು ಹಾಕಿದ್ದನೋ, ಈಗ ತನ್ನ ಆಯುಸ್ಸು ಇಷ್ಟಕ್ಕೆ ಹೀಗೆ ಮುಗಿಯುತ್ತಿತ್ತು. ಇದರಲ್ಲಿ ಅಧಿಕಾರಿಯದೇನು ತಪ್ಪು?

ಗೌರಿ ಪುತ್ತೆ ರೋಧಿಸಿದಳು. ಮತ್ತೆ ಅಧಿಕಾರಿಯನ್ನು ಬಯ್ದಳು-

"ಛೆ, ಸುಮ್ನಿರು ಅತ್ತ" ಎಂದು ರುದ್ರಣ್ಣ ಹೆಂಡತಿಯನ್ನು ದೂಷಿಸಲು ಒಂದು ಕ್ಷಣ ಆ ಕಡೆ ತಿರುಗಿದ. ಆ ಒಂದು ಕ್ಷಣದಲ್ಲಿ ಸಿಂಹವು ಅವನ ಮೇಲೆ ಹಾರಿತು. ಅವನನ್ನು ಹಿಂಡಿ ಹರಿದುಹಾಕಿ, ಮಾಂಸವನ್ನು ತಿಂದು, ರಕ್ತವನ್ನು ಸೀದು, ಎಲುಬುಗಳನ್ನು ಅಲ್ಲಿ ಇಲ್ಲಿ ಎಸೆದು ಹಾಕಿತು. ಮುಂಗೈಯಲ್ಲಿ ಮುಸುಡಿಯನ್ನೊರೆಸಿಕೊಂಡು ತೇಗುತ್ತ ಪಕ್ಕದಲ್ಲಿ ತತ್ತರಿಸುತ್ತ ನಿಂತಿದ್ದ ಆಡನ್ನು ವಿಚಾರಿಸಲು ತಿರುಗಿತು.





# ಸಂಕ್ರಾಂತಿ

ತೋಟಗಾರ ಈರಣ್ಣನಿಗೆ ಹದಿನೈದು ರೂಪಾಯಿ ಸಂಬಳ. ಅದರಲ್ಲಿ ನಾಲ್ಕು ಮಕ್ಕಳು, ಹೆಂಡತಿ, ಗಂಡ ಇವರ ಜೀವನ ನಡೆಯುತ್ತಿತ್ತು. ಯುದ್ಧಕ್ಕೆ ಮುಂಚೆ ಹದಿನೈದು ರೂಪಾಯಿ ಅವನಿಗೆ ಯಥೇಚ್ಛ. ಮನೆಮಂದಿಯೆಲ್ಲ ಹೊಟ್ಟೆತುಂಬ ಹಿಟ್ಟು ಅಂಬಲಿಯನ್ನುಂಡು ಮೈ ತುಂಬ ಮುಚ್ಚಲು ಬಟ್ಟೆಯಾಗಿ, ವರ್ಷಕ್ಕೆ ಹತ್ತೆಂಟು ರೂಪಾಯಿ ಗಂಟಾಗುತ್ತಿತ್ತು. ಯುದ್ಧವಾರಂಭವಾದ ಮೇಲೆ ಪದಾರ್ಥಗಳ ಬೆಲೆ ಆಕಾಶಕ್ಕೇರಿತು. ಹೊಟ್ಟೆ ತುಂಬ ಅಂಬಲಿ ಸಿಗುವುದೇ ಶ್ರಮ. ಪದಾರ್ಥಗಳು ದೊರಕುವುದು ಕಠಿನವಾದಂತೆಲ್ಲ ಹೊಟ್ಟೆಯ ಹಸಿವು ಜಾಸ್ತಿ. ಈರಣ್ಣ ಈವರೆಗೆ ಕೂಡಿಟ್ಟಿದ್ದ ಹಣವೆಲ್ಲ ಮಾಯವಾಯಿತು. ಸಂಬಳವನ್ನು ಹೆಚ್ಚಿಸಬೇಕೆಂದು ಜಮೀನ್ದಾರರನ್ನು ಬೇಡಿಕೊಂಡ. ಜಮೀನ್ದಾರರಿಗೆ ಈ ತೋಟದಿಂದ ಬಹಳ ನಷ್ಟವಾಗುತ್ತಿತ್ತಂತೆ. ಈರಣ್ಣನನ್ನು ಕೆಲಸದಿಂದ ನಿಲ್ಲಿಸಿಬಿಟ್ಟು ಏಳೆಂಟು ರೂಪಾಯಿಗೆ ಒಬ್ಬ ಹುಡುಗನನ್ನು ಕೆಲಸಕ್ಕಿಟ್ಟುಕೊಳ್ಳೋಣವೆಂದು ಯೋಚಿಸಿದ್ದರಂತೆ.

"ಮಕ್ಕಳೊಂದಿಗ ಬುದ್ಧೀ, ಹೊಟ್ಟೇಮೇಲೆ ಹೊಡೀಬೇಡಿ."

"ಅದನ್ನು ನೋಡಿಯೇ ನಿನಗೆ ಹದಿನೈದು ರೂಪಾಯಿ ಕೊಡುತ್ತಿದೇನೆ, ಈರಣ್ಣ. ಹೋದತಿಂಗಳು ಕಾಯಿಪಲ್ಯದ ವ್ಯಾಪಾರದಲ್ಲಿ ನೂರಿಪ್ಪತ್ತೈದು ರೂಪಾಯಿ ಹದಿನಾಲ್ಕಾಣೆ ನಷ್ಟಬಂತು ನೋಡು. ಬಸ್ಸಿನವರು ಛಾರ್ಜು ಜಾಸ್ತಿಮಾಡಿಬಿಟ್ಟರು. ಬೆಂಗಳೂರು ಮಾರ್ಕೆಟ್ಟಿನಲ್ಲಿ ಏಜೆಂಟು ಕಮಿಷನ್ನನ್ನು ಜಾಸ್ತಿ ಮಾಡಿಬಿಟ್ಟ. ಬುಟ್ಟಿಗಳ ಬೆಲೆ ಏರಿಹೋಯ್ತು. ಹೀಗೆ ಒಂದೊಂದಕ್ಕೂ ಬೆಲೆ ಏರುತ್ತ ಹೋದರೆ ನಮ್ಮ ಪಾಡು ಏನಾಗಬೇಕು ಹೇಳು. ನಿನ್ನನ್ನು ನಿಲ್ಲಿಸಿಬಿಟ್ಟು ಸ್ವಲ್ಪ ಸಂಬಳಕ್ಕೆ ಬೇರೆ ಹುಡುಗನನ್ನು ನೋಡೋಣವೆಂದು ಯೋಚಿಸಿದೆ. ನಿನಗೂ ವಯಸ್ಸಾಯಿತು; ಮಕ್ಕಳೊಂದಿಗ. ನನಗೆ ನಷ್ಟವಾದರೂ ಆಗಲಿ, ನಿನ್ನನ್ನು ತೊರೆಯಕೂಡದು ಅಂತ ಅನ್ನಿಸಿತು............"ಹೀಗೆ ಜಮೀನ್ದಾರರು ಏನೇನೋ ಹೇಳಲಾ

ರಂಭಿಸಿದರು. ಈರಣ್ಣ ಅಂದಿನಿಂದ ಸಂಬಳದ ವಿಷಯವಾಗಿ ಅವರಲ್ಲಿ ಪ್ರಸ್ತಾಪಿಸಲಿಲ್ಲ.

ಅವನ ತೋಟವೂ ಗುಡಿಸಲೂ ನಂದೀ ಬೆಟ್ಟದ ತಪ್ಪಲಿನಲ್ಲಿತ್ತು. ದಿನವೂ ಬೆಳಿಗ್ಗೆ ಎದ್ದು ಹಿಂದಿನ ಸಂಜೆ ಕೊಯ್ದಿಟ್ಟಿದ್ದ ಕಾಯಿಪಲ್ಯಗಳನ್ನು ಬುಟ್ಟಿಗಳಲ್ಲಿ ತುಂಬಿಸಿ ಹೊಲೆದು ಒಂಭತ್ತು ಘಂಟೆಗೆ ಬೆಂಗಳೂರಿಗೆ ಹೋಗುವ ಬಸ್ಸಿನಲ್ಲಿ ಒಪ್ಪಿಸುವನು. ವಾರಕ್ಕೆರಡಾವರ್ತಿ ಬೆಟ್ಟದ ಮೇಲಿರುವ ಬಿಳಿಯ ದೊರೆಗೆ ದೊಡ್ಡ ಬುಟ್ಟಿಯ ತುಂಬ ಕಾಯಿಪಲ್ಯವನ್ನು ಹೊತ್ತು ಕೊಂಡು ಹೋಗಿ ಕೊಡಬೇಕು. ಅವರು ಕಾಯಿ ಪಲ್ಯದ ಬೆಲೆ ಎಂಟು ರೂಪಾಯನ್ನೂ ಬಕ್ಷೀಸು ಒಂದು ರೂಪಾಯನ್ನೂ ಕೊಡುವರು. ಕಾಯಿ ಪಲ್ಯದ ಬೆಲೆ ಜಮೀನ್ದಾರರದು. ಬಕ್ಷೀಸು ಈರಣ್ಣನಿಗೆ ಸ್ವಂತ. ಹೀಗೆ ತಿಂಗಳಿಗೆ ಎಂಟು ರೂಪಾಯಿ ಹೆಚ್ಚಾಗಿ ಸಿಗುತ್ತಿತ್ತು. ಬರಗಾಲದಲ್ಲಿ ಇದೂ ಒಂದು ಅದೃಷ್ಟ.

ಈ ದಿನ ಸಂಕ್ರಾಂತಿ. ಈ ದಿನ ಕಾಯಿಪಲ್ಯಕ್ಕಾಗಿ ದೊರೆಯು ಕೊಡುವ ಹಣವನ್ನು ಈರಣ್ಣ ಸಂಕ್ರಾಂತಿಯ ಹಬ್ಬದ ವೆಚ್ಚಕ್ಕಾಗಿ ತೆಗೆದು ಕೊಳ್ಳಬಹುದೆಂದು ಜಮೀನ್ದಾರರು, ಉದಾರವಾಗಿ ಹೇಳಿದ್ದರು. ಈರಣ್ಣನಿಗೆ ತಡೆಯಲಾರದಷ್ಟು ಸಂತೋಷ. 'ನಮ್ಮಪ್ಪ ನಂದೀಶಪ್ಪನು ದೊಡ್ಡವ. ನಂಬಿದವರನ್ನು ಕೈ ಬಿಡೋಲ್ಲ' ಎಂದು ಉಬ್ಬಿದ. ಈರಣ್ಣನ ಹೆಂಡತಿಗೆ ಸೀರೆಯಿಲ್ಲದೆ ಒಂದು ತಿಂಗಳಿಂದ ಹರಕಲು ಸೀರೆಯನ್ನುಟ್ಟುಕೊಂಡಿದ್ದಳು. ಹಬ್ಬಕ್ಕೆ ಹೊಸ ಸೀರೆಯನ್ನುಕೊಂಡು ಕೊಡುತ್ತೇನೆಂದು ಮಾತು ಕೊಟ್ಟಿದ್ದ. ಮಕ್ಕಳಿಗೆಲ್ಲ ಒಂದೊಂದು ಬನೀನು ಹೊಲಿಸುತ್ತೇನೆಂದು ಹೇಳಿದ್ದ. ಕೈಯಲ್ಲಿ ಮಾತ್ರ ಕಾಸಿಲ್ಲ. ದೇವರು ದೊಡ್ಡವ. ಹಬ್ಬಕ್ಕೆ ಸರಿಯಾಗಿ ಒಂಭತ್ತು ರೂಪಾಯಿ ಬರುತ್ತಿತ್ತು. ಬೆಟ್ಟದಿಂದ ಇಳಿದು ಬಂದೊಡನೆ ಅಂಗಡಿಗೆ ಹೋಗಿ ಸೀರೆ ಬಟ್ಟೆಗಳನ್ನು ಕೊಂಡು ಕೊಂಡು ಬರಬೇಕು. ಪಾಯಸವನ್ನು ಮಾಡಲು ಅಕ್ಕಿ ಬೆಲ್ಲ ತರಬೇಕು. ಇವನ್ನೆಲ್ಲ ತಂದು ಇನ್ನೂ ಹಣ ಉಳಿದರೆ ತನಗೊಂದು ಪಂಚೆಯ ತುಂಡನ್ನು ತೆಗೆದು ಕೊಳ್ಳಬೇಕು.

ಇದು ಈರಣ್ಣನ ಅಭಿಲಾಷೆ.

ಬಸ್ಸಿಗೆ ಕಾಯಿಪಲ್ಯದ ಬುಟ್ಟಿಯನ್ನೇರಿಸಿಕೊಟ್ಟ ಬಳಿಕ ಬೆಟ್ಟದ ಮೇಲೆ ಹತ್ತಿಹೋಗುವುದು ಎಂದಿನ ವಾಡಿಕೆ. ಈ ದಿನ ಸಂಕ್ರಾಂತಿ ಹಬ್ಬ. ಹಬ್ಬವನ್ನು ಕೊಂಡಾಡಬೇಕಾದರೆ ಬೆಳಗಿನ ಝಾವಕ್ಕೆ ಬೆಟ್ಟಕ್ಕೆ ಹೋಗಿ ಹಣವನ್ನು ತೆಗೆದುಕೊಂಡು ಬರಬೇಕು. ಆದ್ದರಿಂದ ಮೊದಲನೆಯ ಕೋಳಿ ಕೂಗುವ ಹೊತ್ತಿಗೇ ಎದ್ದು ಬೇಗ ಬೇಗನೆ ಬುಟ್ಟಿಗೆ ಮುಚ್ಚಳವನ್ನು ಹೊಲಿದ. ತುಂಡು ಪಂಚೆಯನ್ನು ಕಟ್ಟಿ, ಜವಿರ್ಾದಾರರ ಮಗ ಎಂಟು ವರ್ಷದ ಹಿಂದೆ ಕೊಟ್ಟಿದ್ದ ಹರಕು ಅಂಗಿಯನ್ನು ತೊಟ್ಟು, ತಲೆಯಮೇಲೆ ಇಟ್ಟುಕೊಳ್ಳಲು ತುಣುಕು ಬಟ್ಟೆಯನ್ನು ಸುರುಳಿ ಸುತ್ತಿದ.

"ಹೊರಗೆ ಚಳಿ ಗಾಳಿ ಹಾಗೆ ಹೊಡೆಯುತ್ತಿದೆಯಲ್ಲ; ಮಳೆ ಬಂದರೂ ಬರ್‍ತದ. ಒಂದೀಸು ಕಾಫೀ ಕಾಸಿ ಕೊಡ್ತೇನ್ ಒಲೆ ಹಚ್ಚಿ"—ಈರಣ್ಣನ ಹೆಂಡತಿ ನಿದ್ದೆಯಿಂದ ಎಚ್ಚತ್ತು ಹಾಸಿಗೆಯಲ್ಲಿ ಮಲಗಿದ್ದ ಹಾಗೆಯೇ ಉದ್ಗಾರ ತೆಗೆದಳು.

"ಕಾಫೀಗೆ ಹಾಲು ಎಲ್ಲದೆ? ಕಡು ಕಾಫಿ ಕುಡೀಬೇಕೇನು? ಚಳಿ ಏನು ಮಾಡಾತು, ಮಳೆ ಏನು ಮಾಡಾತು? ದಿನ ಹುಟ್ಟಿ ಗೇಣು ಏರುವ ದರೊಳಗ ಹಾರಿ ಬಂದು ಬಿಡುವೆನಲ್ಲ! ಹಬ್ಬದ ದಿನ ಮೈ ತೊಳೀದೆ ಹೊಟ್ಟೆ ತುಂಬುವರುಂಟ? ಗಡ ಗಡನೆದ್ದು ನೀರು ಕಾಯಿಸಿ ಮರಿಗಳಿಗೆಲ್ಲ ಅಭ್ಯಂಜನ ಮಾಡಿಸು. ನೀನೂ ಅಷ್ಟು ಎಣ್ಣೆ ಹಚ್ಚಿಕೊಂಡು ತಲೆ ಮುಳುಗು. ನಾ ಬೇಗನೆ ಬಂದು ಸ್ನಾನಮಾಡಿ ಕಾಫಿ ಕುಡಿದು ಬಸಪ್ಪ ನಂಗಡೀಲಿ ಸೇಲೆ ಬಟ್ಟೆಗಳನ್ನು ತರುವೆ....ಕೋ, ಬುಟ್ಟಿಗೆ ಒಂದು ಕೈ ಕೊಟ್ಟು ತಲೆಯಮೇಲೆ ಎತ್ತಿಡು ಬಾ."

"ಬೇಗನೆ ಬಂದು ಬಿಡು" ಎನ್ನುತ್ತ ಈರಣ್ಣನ ಹೆಂಡತಿ ಕಾಯಿ ಪಲ್ಯದ ಬುಟ್ಟಿಯನ್ನು ಅವನ ತಲೆಯಮೇಲೆ ಇಟ್ಟಳು.

"ಹೀಗೆ ಹೋಗಿ ಹಾಗೆ ಬಂದು ಬಿಡುತ್ತೇನಲ್ಲ." ಎನ್ನುತ್ತ ಈರಣ್ಣ ಹೊರಟ. ಲಗುಬಗೆಯಿಂದ ಬೆಟ್ಟವನ್ನು ಹತ್ತಿದ. ಚಳಿ ಗಾಳಿಯು ಕೊರೆಯುತ್ತಿತ್ತು. ಮೋಡಗಳು ಆರ್ಭಟಿಸಿದುವು. ಹಿಮದಿಂದ ತೇವವಾದ ಬೆಟ್ಟದ ಮೆಟ್ಟಲುಗಳು ಈರಣ್ಣನ ಬರಿಗಾಲನ್ನು ಚುಚ್ಚಿದವು. ಅವನಿಗೆ ಇದೆಲ್ಲ ಲಕ್ಷ್ಯವಿಲ್ಲ. ಬುಟ್ಟಿಯನ್ನು ಬೇಗನೆ ದೊರೆಗೆ ಕೊಟ್ಟು ಹಣವನ್ನು

ತೆಗೆದುಕೊಂಡು ಬರಬೇಕು. ಹಬ್ಬವನ್ನು ಚೆನ್ನಾಗಿ ಕೊಂಡಾಡಬೇಕು. ಹೆಂಡತಿ ಮಕ್ಕಳೆಲ್ಲ ಹೊಸಬಟ್ಟೆಗಳನ್ನು ತೊಟ್ಟು ನಲಿದಾಡುವುದನ್ನು ನೋಡಬೇಕು. ಸಂಸಾರಿಗೆ ಅದೇ ಆನಂದ. ಹೆಂಗಸು ಮಕ್ಕಳನ್ನು ಸುಖ ವಾಗಿಟ್ಟಿರುವುದೇ ಸಂಸಾರಿಗೆ ಮೋಕ್ಷ. ಸಂಸಾರಕ್ಕಾಗಿ ತಾನು, ತನಗಾಗಿ ಸಂಸಾರ.

ಬೆಟ್ಟವನ್ನು ಏರಿದಂತೆಲ್ಲ ಚಳಿ ಹೆಚ್ಚಾಯಿತು. ಈರಣ್ಣನು ಒಂದು ಕೈಯಲ್ಲಿ ಬುಟ್ಟಿಯನ್ನು ಹಿಡಿದುಕೊಂಡು ಇನ್ನೊಂದರಲ್ಲಿ ಅಂಗಿಯ ಗುಂಡಿ ಗಳನ್ನು ಮೇಲಿನಿಂದ ಕೆಳಗಿನವರೆಗೆ ಹಾಕಿದ. ಚಳಿಗಾಳಿಯು ಅಂಗಿಯ ಛಿದ್ರಗಳಲ್ಲಿ ತೂರಿ ಮೈಯನ್ನು ಕಚ್ಚುತ್ತಿತ್ತು. ಮಳೆಯ ಹನಿಗಳು ಪಟ ಪಟನೆ ಹೊಡೆದವು.

ಈರಣ್ಣ ಒಂದೊಂದು ಮೆಟ್ಟಲಾಗಿ ಹತ್ತುತ್ತ ಹೋದ. ಧೊರೆಯ ಬಳಿಗೆ ಹೋಗಿ ಹಳೆಯ ಅಂಗಿಯನ್ನು ಕೇಳಿ ತೆಗೆದುಕೊಳ್ಳಬೇಕು. ಆತ ದಯಾಳುವಾದ ಪ್ರಾಣಿ. ಮೃದುವಾಗಿ ಮಾತನಾಡುತ್ತಿದ್ದ. ಇದುವರೆಗೆ ಎಂದೂ ಅವನನ್ನು ತಿರುಪೆ ಬೇಡಿರಲಿಲ್ಲ, ಕಾಯಿಪಲ್ಯಕ್ಕೆ ಬಕ್ಷೀಸನ್ನು ಅವನಾಗಿ ಅವನೇ ಕೊಡುತಿದ್ದ.

" ನಿನಗೆಷ್ಟು ಮಂದಿ ಮಕ್ಕಳು ? " ಎಂದು ಒಮ್ಮೆ ಕೇಳಿದ.

" ನಾಲ್ಕು ಮಂದಿ ಸ್ವಾಮಿ. ಎಲ್ಲ ಚಿಕ್ಕವರು. ಇನ್ನೆರಡುವರ್ಷಕ್ಕೆ ಹಿರೇಮಗನಿಗೆ ಹತ್ತುವರ್ಷ ತುಂಬುತ್ತೆ. ಆನಂತರ ಅವನನ್ನು ತೋಟಕ್ಕೆ ಹಾಕಿಕೊಂಡರೆ ನನಗೆ ಸ್ವಲ್ಪ ವಿರಾಮ ಸಿಗುತ್ತೆ."

" ಸ್ಕೂಲಿಗೆ ಹೋಗಲ್ಲವೆ ? "

" ಬಡವರಿಗೆ ಓದೇಕೆ ದೇವರು ? ಕೂಲಿಯೋ ನಾಲಿಯೋ ಮಾಡಿ ಜೀವನ ಕಳೆದರೆ ನಮ್ಮ ಪಾಡು ತೀರಿತು. ನಮಗೆ ಓದು ಹೇಳಿ ಕೊಡಲು ಸಾಧ್ಯವಿಲ್ಲ ಬುದ್ಧಿ."

" ನಾವು ಬಡವರಾದಾಕ್ಷಣ ನಮ್ಮ ಮಕ್ಕಳೂ ಬಡವರಾಗಬೇಕೇನು? ಎಷ್ಟು ಬಡವರಾದರೂ ಮಕ್ಕಳಿಗೆ ವಿದ್ಯೆಯನ್ನು ಮಾತ್ರ ನಿಲ್ಲಿಸಬಾರದು ನೋಡು. ಅದರಿಂದ ನಮಗೆ ಪಾಪ, ನಮ್ಮ ಮಕ್ಕಳಿಗೆ ಪಾಪ, ನಮ್ಮ ದೇಶಕ್ಕೆ ಪಾಪ ! "

"ಅವಕಾಶವಿಲ್ಲವಲ್ಲ ಸ್ವಾಮಿ. ನಮ್ಮ ಹೊಟ್ಟೆಯಪಾಡು ಕಳೆಯುವುದೇ ಕಷ್ಟವಾಗಿದೆ."

"ಇಕೋ, ಐದು ರೂಪಾಯಿ ಕೊಡುತ್ತೇನೆ. ನಿನ್ನ ಮಗನಿಗೆ ಕೋಟು ಟೋಪಿ ಕೊಂಡುಕೋ. ಸ್ಲೇಟು ಪುಸ್ತಕಗಳನ್ನು ಕೊಂಡುಕೋ. ಸ್ಕೂಲಿಗೆ ಕಳುಹಿಸು ಹೋಗು.''

ಇದು ಆರು ತಿಂಗಳ ಹಿಂದಿನ ಮಾತು. ಈಗ ಈರಣ್ಣನ ಮಗ ಸ್ಕೂಲಿಗೆ ಹೋಗಿ ಪಾಠಗಳನ್ನು ಅಂದವಾಗಿ ಕಲಿಯುತ್ತಿದ್ದ.

ಧೊರೆಯು ಅಂಥಾ ಕರುಣಾಶಾಲಿಯೆಂದ ಮಾತ್ರಕ್ಕೆ ಈರಣ್ಣ ಅವನಲ್ಲಿ ಏನನ್ನೂ ಬೇಡಿರಲಿಲ್ಲ. ಈವತ್ತು ಛಳಿ ಹೀಗೆ ಕೊರೆಯುತ್ತಿತ್ತು. ಧೊರೆಯು ಒಂದು ಅಂಗಿಯನ್ನು ಕೊಟ್ಟರೆ ಶರೀರಕ್ಕೆ ಎಷ್ಟೋ ಸೌಖ್ಯ. ಈವತ್ತು ಕೇಳಿಯೇ ನೋಡಬೇಕು. ಸಂಕ್ರಾಂತಿ ಹಬ್ಬ. ನೀವು ತೊಟ್ಟು ಹಳೇದು ಮಾಡಿ ಮೂಲೆಯಲ್ಲೆಸೆದ ಅಂಗಿಯನ್ನು ಕೊಟ್ಟರೆ ಜೀವಕ್ಕೆ ತೃಪ್ತಿಯಾದೀತು, ಎಂತ ಕೇಳಬೇಕು. ಧೊರೆ ಒಳ್ಳೆಯವ ; ಕೊಟ್ಟೇ ಕೊಡುವ.

ಈರಣ್ಣ ಹೀಗೆ ನೆನಸುತ್ತ ಮೇಲೆ ಮೇಲೆ ಹತ್ತಿ ನಡೆದ. ಮಳೆಯು ಬಿರುಸಾಗಿ ಎದುರಿಗೆ ಹೊಡೆಯುತ್ತಿತ್ತು. ಚಳಿ ಹೇಳತೀರದು. ಕೈ ಕಾಲುಗಳು ಬಿಗಿಯುತ್ತ ಬಂದವು. ಮೆಟ್ಟಲುಗಳನ್ನು ಹತ್ತುವುದೇ ಕಷ್ಟವಾಯಿತು.

ಅಯ್ಯೋ ದೇವರೆ ! ಬೇಗ ಬೇಗನೆ ಹೋಗೋಣವೆಂದರೆ ಕೈ ಕಾಲುಗಳು ಬಿಗಿಯುತ್ತವಲ್ಲ ! ಹೊಟ್ಟೆಗಷ್ಟು ಬೆಚ್ಚಗೆ ಕಾಫಿ ಕುಡಿದಿದ್ದರೆ ನೆಟ್ಟಗಿತ್ತಲ್ಲ ! ಬೆಟ್ಟದಮೇಲೆ ಹೋದಮೇಲಾದರೂ ಒಂದು ಕಪ್ಪು ಕಾಫೀ ಕುಡೀಬೇಕು, ಎರಡಾಣೆ ಹೋದರೂ ಚಿಂತೆಯಿಲ್ಲ.

ಆದರೆ ಬೆಟ್ಟದಮೇಲೆ ಹೋಗುವುದಾದರೂ ಹೇಗೆ ? ಇನ್ನೂ ಅರ್ಧ ದಾರಿ ಕೂಡ ಬಂದಿಲ್ಲವಲ್ಲ ! ಆಂಜನೇಯ ಸ್ವಾಮಿಯ ಕಲ್ಲಿನ ಬಳಿಗೆ ಹೋದರೆ ಅಲ್ಲಿರುವ ಗವಿಯಲ್ಲಿ ಹೋಗಿ ಅಡಗಿಕೊಳ್ಳಬಹುದು. ಅದಕ್ಕಿನ್ನೂ ನೂರಿನ್ನೂರು ಮೆಟ್ಟಲು ಹತ್ತಬೇಕು.

ಚಳಿಯಿಂದ ಈರಣ್ಣನ ಕೈಕಾಲು ಸೇದಿಕೊಂಡಿತು. ತಲೆಯಮೇಲಿದ್ದ ಕಾಯಿಪಲ್ಯದ ಬುಟ್ಟಿಯು ಕೆಳಗುರುಳಿತು. ಅದನ್ನೊಂದು ಬದಿಗಿಟ್ಟು

ಪಕ್ಕದಲ್ಲಿದ್ದ ಮರದ ಕೆಳಗೆ ನಿಂತ. ಮಳೆಯು ಗುಡುಗು ಮಿಂಚುಗಳೊಡನೆ ಆರ್ಭಟಿಸಿತು. ದೂರದಲ್ಲಿ ಸಿಡಿಲಿನ ಚಟ ಚಟ ಶಬ್ದ. ತಾನು ನಿಂತಿದ್ದ ಪ್ರದೇಶದಲ್ಲಿ ಸಿಡಿಲು ಬಿದ್ದೀತೆಂಬ ಭಯ. ಕೈಗಳೆರಡನ್ನೂ ಕಟ್ಟಿಕೊಂಡು ಈರಣ್ಣ ಓಡಿದ. ಮೆಟ್ಟಲುಗಳನ್ನು ಹತ್ತಿದ. ಪ್ರಾಣದೇವರನ್ನು ಕೆತ್ತಿದ್ದ ಕಲ್ಲು ಬಂಡೆ ಅದೋ ಅಲ್ಲಿ ಕಾಣುತ್ತಿತ್ತು. ಅಲ್ಲಿಗೆ ಸೇರಿ ಬಿಟ್ಟರೆ ಅವನು ಧನ್ಯ. ಅದರ ಬಳಿಯಿರುವ ಗವಿಯಲ್ಲಿ ಮಳೆ ನಿಲ್ಲುವತನಕ ಅಡಗಿಕೊಂಡಿದ್ದು ಆ ಮೇಲೆ ಬುಟ್ಟಿಯನ್ನೆತ್ತಿಕೊಂಡು ಹೋಗಬಹುದು. ಮನೆಗೆ ಸೇರುವುದು ಸ್ವಲ್ಪ ಹೊತ್ತಾದೀತು. ಅಂಗಡಿಗೆ ಹೋಗಿ ಹೊಸಬಟ್ಟೆಗಳನ್ನೂ ಅಕ್ಕಿ ಬೆಲ್ಲವನ್ನೂ ಕೊಂಡು ಬಂದು ಹಬ್ಬಮಾಡಲು ಇನ್ನೂ ಅಷ್ಟು ಹೊತ್ತಾದೀತು........

ಈರಣ್ಣನಿಗೆ ಮುಂದೆ ಯೋಚಿಸಲಾಗಲಿಲ್ಲ. ಬುದ್ಧಿ ಮಂದವಾಯಿತು. ಕಿವಿಗಳಲ್ಲಿ ಬಂoooooo ಎಂದು ಚಳಿ ತೂರಿ ಕೂರುತ್ತಿತ್ತು. ಕಾಲು ಹಠಾತ್ತಾಗಿ ಸೇದಿಕೊಂಡಿತು. ಹಲ್ಲು ಕಡಿಯಿತು. ಬಾಯಿ ಬಿಗಿಯಿತು.

ಅಂಜನೇಯನ ಕಲ್ಲಿಗೆ ಇನ್ನೂ ಹತ್ತು ಮೆಟ್ಟಲು ಬಾಕಿ. ಈರಣ್ಣನಿಗೆ ಮೆಟ್ಟಲುಗಳನ್ನು ಹತ್ತಲಾಗಲಿಲ್ಲ. ಚಳಿ ಅವನನ್ನು ಹಿಸುಕಿ ಹಾಕಿತು. ಅಲ್ಲಿಯೇ ಕೈಕಾಲುಗಳನ್ನು ಕಟ್ಟಿಕೊಂಡು ಕೂತರಾದರೂ ಚಳಿ ಬಾಧಿಸದೆಂದು ಆ ನಿರ್ಭಾಗ್ಯನಿಗೆ ಆ ಸಮಯದಲ್ಲಿ ತೋರಲಿಲ್ಲ. ಎದೆಯಲ್ಲಿ ರಕ್ತದೋಟವು ದಡಕ್ಕನೆ ನಿಂತುಹೋಯಿತು. ಎದೆಯಲ್ಲಿ ತಡೆಯಲಾರದಷ್ಟು ನೋವು. ಕೈಯನ್ನು ಎದೆಯ ಮೇಲಿಟ್ಟುಕೊಂಡ. ಅಲ್ಲಿಂದ ಹಾಗೆಯೇ ಮೆಟ್ಟಲುಗಳಿಂದ ಕೆಳಕ್ಕೆ ಉರುಳಿದ. ಹತ್ತಿಪ್ಪತ್ತು ಮೆಟ್ಟಲುಗಳನ್ನುರುಳಿ ಹೋದಮೇಲೆ ಒಂದು ಕಲ್ಲುಬಂಡೆಗೆ ಸಿಕ್ಕಿಕೊಂಡ. ಅವನ ಪ್ರಾಣ ಹೋಯಿತು. ತಲೆಯು ಪ್ರಾಣದೇವರ ಕಡೆ ತಿರುಗಿತ್ತು. ಜೀವವಿಲ್ಲದ ಕಣ್ಣ ದೃಷ್ಟಿ ಅಲ್ಲಿಯೇ ನೆಲೆಸಿತ್ತು.



# ◆ ಚಂಚಲ ದೃಷ್ಟಿ ◆



ಭದ್ರಯ್ಯ ಕೊಪ್ಪ ಚಿಕ್ಕಮಗಳೂರು ಬಸ್ ಸರ್ವಿಸ್ಸಿನಲ್ಲಿ ಡ್ರೈವರು. ಏಳೆಂಟು ವರ್ಷದಿಂದ ಆ ರಸ್ತೆಯಲ್ಲಿ ಅನುಭವ. ಅವನು ಕೆಲಸಕ್ಕೆ ಸೇರಿ ದಾಗಿನಿಂದ ತನ್ನ ಗಾಡಿಯನ್ನು ಇನ್ನೊಬ್ಬರ ಕೈಗೆ ಕೊಡುತ್ತಿರಲಿಲ್ಲ. ಅದು ಪುರಾತನವಾದ ಫೋರ್ಡುಗಾಡಿ. ಅವನೊಬ್ಬನೇ ಅದನ್ನು ನಡೆಸಲು ಲಾಯಖ್ಖು, ಕಾಡು-ಮೇಡುಗಳಲ್ಲಿ, ಹಳ್ಳ-ತಿಟ್ಟುಗಳಲ್ಲಿ, ಕಣಿವೆ-ಬಣಿವೆ ಗಳಲ್ಲಿ, ಅವನು ತನ್ನ ಗಾಡಿಯನ್ನು ಲಕ್ಷ್ಯವಿಲ್ಲದೆ ಬಿಟ್ಟುಕೊಂಡು ಹೋಗು ತ್ತಿದ್ದ. ಗಾಡಿ ಜನಗಳಿಂದ ಭರ್ತಿಯಾಗಿದ್ದರೂ ಸರಿ, ಅಲ್ಲಿಂದ ಇಲ್ಲಿಯ ತನಕ ಖಾಲಿಯಾಗಿ ಬಂದರೂ ಸರಿ, ಒಂದೇ ವೇಗದಿಂದ ಅಲುಗಾಡದೆ ಬರುತ್ತಿತ್ತು. ಒಡಕಲು ಎಂಜಿನ್, ಒಡಕಲು ಗೇರು, ಒಡಕಲು ಬ್ರೇಕು.— ಇವೆಲ್ಲ ಭದ್ರಯ್ಯನಿಗೊಬ್ಬನಿಗೇ ಒಗ್ಗುತ್ತಿತ್ತು. ಇಂಥ ಗಾಡಿಯನ್ನು ಚಿಕ್ಕ ಮಗಳೂರು—ಕೊಪ್ಪದ ರಸ್ತೆಯಲ್ಲಿ ನಿರಪಾಯವಾಗಿ ಏಳೆಂಟು ವರ್ಷದಿಂದ ಬಿಡುತ್ತಿದ್ದ. ರಸ್ತೆಯು ಅವನಿಗೆ ಸರಾಗವಾಗಿ ಪಳಗಿತ್ತು. ಎಲ್ಲಿ ಡೊಂಕುಗ ಳಿವೆ, ಎಲ್ಲಿ ಗೇರುಹಾಕಬೇಕು, ಎಲ್ಲಿ ಬ್ರೇಕನೊತ್ತಬೇಕು ಎಂಬುದನ್ನು ಅವನು ಯೋಚಿಸಲೇ ಬೇಕಾಗಿರಲಿಲ್ಲ. ಕೈ ಕಾಲುಗಳು ಯಂತ್ರದಂತೆ ಕ್ರಮವಾಗಿ ಕೆಲಸಮಾಡಿ ಗಾಡಿಯನ್ನು ನಡೆಸುತ್ತಿದ್ದವು. ಒಂದೊಂದು ಸಲ ಹಿಮದರಾಶಿ ರಸ್ತೆಯನ್ನು ಕವಿಯುತ್ತಿತ್ತು. ರಸ್ತೆಯು ನೆಟ್ಟಗಿದೆಯೋ ಸೊಟ್ಟಗಿದೆಯೋ ತಿಳಿಯುತ್ತಿರಲಿಲ್ಲ. ಭದ್ರಯ್ಯನಂತೂ ಕಣ್ಣುಮುಚ್ಚಿ ಕೊಂಡು ಗಾಡಿ ಬಿಡುತ್ತಿದ್ದ. ಒಂದು ದಿನ ಅಮಾವಾಸ್ಯೆ. ಚಿಕ್ಕಮಗಳೂ ರಿನಿಂದ ಸಂಜೆ ಆರು ಘಂಟೆಗೆ ಹೊರಟ. ಏಳೆಂಟು ಘಂಟೆ ಸುಮಾರಿನಲ್ಲಿ ಬೇಟರಿ ಕೆಟ್ಟುಹೋಗಿ ಬಸ್ಸಿನ ಮುಂದೀಪ ಆರಿಹೋಯಿತು. ಕತ್ತಲೋ ಕತ್ತಲು. ನಕ್ಷತ್ರದ ಬೆಳಕಿನಲ್ಲಿ ನಸಕು ನಸಕಾಗಿ ಸ್ವಲ್ಪದೂರ ದಾರಿ ಕಾಣಿಸಿತು. ಅನಂತರ ಬೆಟ್ಟದ ಮೇಲೆ ಏರುತ್ತ ಏರುತ್ತ ರಸ್ತೆಯನ್ನು ಹಿಮವು ಕವಿದಿತು. ಬಸ್ಸಿನಲ್ಲಿ ಜನಗಳು ಭರ್ತಿ. ಎಲ್ಲರೂ ತಮ್ಮ ಪ್ರಾಣ ವನ್ನು ಕೈಯಲ್ಲಿಟ್ಟುಕೊಂಡಿದ್ದರು. ಭದ್ರಯ್ಯನಿಗೆ ಅದರ ಬಗ್ಗೆ ಹೆದರಿಕೆಯೇ

ಇರಲಿಲ್ಲ. ಕೂತ ಜನಗಳಿಗೆ ಧೈರ್ಯವನ್ನು ಹೇಳುತ್ತ ಗಾಡಿಯನ್ನು ಸರಾಗವಾಗಿ ನಡಸಿಕೊಂಡು ಬಂದ.

ಭದ್ರಯ್ಯನನ್ನು ಕಂಡರೆ ಸರ್ವಿಸ್ ಮಾಲೀಕರಿಗೆ ಬಹಳ ಹೆಮ್ಮೆ. ಅವನು ದುರಾಸೆಯಿಲ್ಲದೆ ಶ್ರದ್ಧೆಯಿಂದ ಕೆಲಸ ಮಾಡುತ್ತಿದ್ದ. ಸಂಬಳವನ್ನು ಜಾಸ್ತಿ ಮಾಡಬೇಕೆಂದು ಒಂದು ದಿನವೂ ಕೇಳಿದವನಲ್ಲ. ದಾರಿಯಲ್ಲಿ ವೀಳೆಯದೆಲೆ, ಬಾಳೆಯ ಸೀಳು ಇವುಗಳ ಹೇರನ್ನು ಹೇರಿಸಿಕೊಳ್ಳುವಾಗ ಬರುತ್ತಿದ್ದ ದುಡ್ಡನ್ನು ಲೆಕ್ಕಾಚಾರವಾಗಿ ಕಂಪೆನಿಗೆ ಒಪ್ಪಿಸುತ್ತಿದ್ದ. ಹೊತ್ತಿಗೆ ಸರಿಯಾಗಿ ಊರನ್ನು ಬಿಟ್ಟು, ಹೊತ್ತಿಗೆ ಸರಿಯಾಗಿ ಊರನ್ನು ಸೇರುತ್ತಿದ್ದ ಇದನ್ನೆಲ್ಲ ಕಂಡು ಭದ್ರಯ್ಯನ ಮೇಲೆ ಜನಗಳಿಗೂ ಮಮತೆ, ಮಾಲೀಕರಿಗೂ ಅಭಿಮಾನ. ಮೂವತ್ತು ರೂಪಾಯಿನಲ್ಲಿ ಕೆಲಸಕ್ಕೆ ಸೇರಿದವನು ನಾಲ್ಕೈದು ವರ್ಷಕ್ಕೆ ಅರವತ್ತು ರೂಪಾಯಿಗೇರಿದ.

ಭದ್ರಯ್ಯನಿಗಿನ್ನೂ ಇಪ್ಪತ್ತಾರು ಇಪ್ಪತ್ತೇಳು ವಯಸ್ಸು. ಮದುವೆ ಆಗಿರಲಿಲ್ಲ. ಈ ವರ್ಷವೋ ಮುಂದಿನ ವರ್ಷವೋ ಮದುವೆ ಮಾಡಿಕೊಳ್ಳಬೇಕೆಂದಿದ್ದ. ಅಕ್ಕನ ಮಗಳಿದ್ದಳು. ಅತ್ತೆಯ ಮಗಳಿದ್ದಳು. ನೆರೆಹೊರೆಯವರು ತಮ್ಮ ಮಗಳನ್ನು ಮಾಡಿಕೊಳ್ಳೆಂದು ಬೇಡುತ್ತ ಬಂದಿದ್ದರು. ಭದ್ರಯ್ಯನಿಗೆ ಹೆಣ್ಣು ಲಕ್ಷಣವಾಗಿರಬೇಕು; ಗುಣಶಾಲಿಯಾಗಿರಬೇಕು; ಮನೆತನ ಚೆನ್ನಾಗಿರಬೇಕು; ಈ ಮೂರೂ ಹೊಂದಿದ ಸಂಬಂಧ ಈವರೆಗೆ ದೊರೆತಿರಲಿಲ್ಲ. ಅಕ್ಕನ ಮಗಳಿಗೆ ರೂಪವಿಲ್ಲ. ಅತ್ತೆಯ ಮಗಳಿಗೆ ಇರುಳುಗಣ್ಣು. ನೆರೆಹೊರೆಯ ಹುಡುಗಿಯರಲ್ಲಿ ಒಂದಿಲ್ಲದಿದ್ದರೆ ಇನ್ನೊಂದು ಐಬು. ಗುಣವಿದ್ದರೆ ರೂಪವಿಲ್ಲ; ರೂಪವಿದ್ದರೆ ಮನೆತನವು ಶುದ್ಧವಿಲ್ಲ. ನೋಡಹೋದ ಹೆಣ್ಣುಮಕ್ಕಳೆಲ್ಲ ಹೀಗೆ ಒಂದಿಲ್ಲೊಂದು ಕಾರಣದಿಂದ ನಿಕೃಷ್ಟರಾಗಿದ್ದರು. ಇದನ್ನು ಕಂಡು ಭದ್ರಯ್ಯನಿಗೆ ಬೇಸರವಾಗಿ ಬಿಟ್ಟಿತ್ತು. ಇಂಥಾ ಹೆಣ್ಣುಮಕ್ಕಳನ್ನು ಏಕಾದರೂ ಹುಟ್ಟಿಸಿದೆಯಪ್ಪಾ ಶಿವನೇ ಎಂದ ನಿಟ್ಟುಸಿರು ಬಿಡುತ್ತಿದ್ದ. ಇಂಥವರನ್ನು ಮದುವೆಯಾದರೂ ಏಕೆ ಮಾಡಿಕೊಳ್ಳ ಬೇಕೆನ್ನಿಸಿತು. ಆಯಾಸಪಟ್ಟು ಮನೆಗೆ ಹೋದಾಗ ಆದರದಿಂದ ಎದುರುಗೊಂಡು, ಕೈಕಾಲು ತೊಳೆಯಲು ನೀರುಕೊಟ್ಟು, ಹೊಟ್ಟೆಗೆ ಹಿಟ್ಟು ಹಾಕಿ ಮನಸಾರ ಮಾತನಾಡಿಸಿ, ಆಯಾಸವನ್ನು ನೀಗಿಸುವ ಹೆಂಡತಿ

ಇದ್ದಾಗ ತಾನೇ ಮನುಷ್ಯನಿಗೆ ಸುಖ ಬಂದೀತು? ದುಡ್ಡಿನಾಸೆಗೆ ಕುರುಡು ಗಣ್ಣು ಕುಂಟು ಕಾಲುಳ್ಳ ಹುಡುಗಿಯನ್ನು ಕಟ್ಟಿಕೊಂಡು ಹುಟ್ಟುವ ಮಕ್ಕಳೂ ಸಹ ಅಂಗಹೀನರಾದರೆ ಆಗ ಸಂಸಾರ ಸುಖ ಎಷ್ಟು ಚೆನ್ನಾಗಿದ್ದೀತು ? ಹೀಗೆ ಮದುವೆಯಾಗುವುದಕ್ಕಿಂತ ಬ್ರಹ್ಮಚಾರಿಯಾಗಿರುವುದು ಉತ್ತಮವಲ್ಲವೆ ?

ಆ ದಿನ ಬೆಳಿಗ್ಗೆ ಕೊಪ್ಪದಲ್ಲಿ ಬಸ್ಸೇರಿ ಕುಳಿತಾಗ ಭದ್ರಯ್ಯ ತನ್ನಲ್ಲಿ ತಾನು ಹೀಗೆ ತರ್ಕಿಸುತ್ತಿದ್ದ. ಹಿಂದಿನ ಸೀಟಿನಲ್ಲಿ ಆ ಕೊನೆಯಲ್ಲೊಂದು ಹುಡುಗಿ ಕೂತಿತ್ತು. ರಮ್ಯವಾದ ಕಣ್ಣು, ಹದಿನೈದು ಹದಿನಾರು ವರ್ಷ; ಕಳೆ ತುಂಬಿದ ತಿಳಿಯಾದ ಮುಖ. ಮೆಟ್ಟಿಲು ಮೆಟ್ಟಿಲಾಗಿ ತಲೆಗೂದಲನ್ನು ಬಾಚಿ ಇಷ್ಟುದ್ದ ಜಡೆಯು ಸೀಟಿನ ಮೇಲೆ ಈಜುತ್ತ ಬಿದ್ದಿತ್ತು. ಚಂಚಲವಾದ ದುಂಡು ಕಂಗಳು. ಕುಳ್ಳು ಶರೀರ. ಮದುವೆಯಾದರೆ ಇಂಥ ಹುಡುಗಿಯನ್ನು ಮದುವೆ ಆಗಬೇಕು, ಸುಖಪಡಬೇಕು ಎಂದುಕೊಳ್ಳುತ್ತಲೇ ಗಾಡಿಯನ್ನು ಕದಲಿಸಿ ಹೊರಡಿಸಿದ. ಚಕ್ರದ ಮೇಲೆ ಕೈಯೂರಿಕೊಂಡು ರಸ್ತೆಯನ್ನು ನೋಡುತ್ತ ಹಗಲಗನಸು ಕಟ್ಟಿದ. ಹುಡುಗಿಯನ್ನು ಮದುವೆ ಮಾಡಿಕೊಂಡರೆ ಮನೆಯನ್ನು ಇಲ್ಲಿ ಮಾಡಬೇಕು, ಸಂಸಾರವನ್ನು ಹೀಗೆ ನಡೆಸಬೇಕು. ಎಂಟು ದಿನಕ್ಕೊಮ್ಮೆ ಸಿನಿಮಾ ತೋರಿಸಬೇಕು. ಹೆಂಡತಿಯನ್ನು ಹೂವಿನಹಾಗೆ ನೋಡಿಕೊಳ್ಳಬೇಕು. ಅವಳ ಮನಸ್ಸನ್ನು ನೋಯಿಸದೆ ಚಿನ್ನದ ಚಿಗುರಿಯಹಾಗೆ ನೋಡಿಕೊಳ್ಳಬೇಕು. ಅವನಿಗೆ ಅರವತ್ತು ರೂಪಾಯಿ ಸಂಬಳ ಬರುತ್ತಿತ್ತು. ಪ್ರಯಾಣ ಭತ್ಯ ಮೂವತ್ತು ರೂಪಾಯಿ. ಒಟ್ಟು ತೊಂಭತ್ತು ರೂಪಾಯಿಯಲ್ಲಿ ಸಂಸಾರ ಸೊಗಸಾಗಿ ನಡೆಯುವುದು ತಾನು, ತನ್ನ ತಾಯಿ, ತನ್ನ ಹೆಂಡತಿ-ಈ ಮೂವರು ತಿಂದು ತೇಗಿ ಉರುಳಾಡುವಷ್ಟು ಸೊಗಸಾಗಿ ನಡೆಯುವುದು.

ಭದ್ರಯ್ಯ ಹುಡುಗಿಯ ಕಡೆ ತಿರುಗಿ ನೋಡಿದ. ನಗುಮೊಗದ ಹುಡುಗಿ. ಅವಳೂ ಭದ್ರಯ್ಯನನ್ನು ನೋಡಿದಳು. ಭದ್ರಯ್ಯನಿಗೆ ಮೈ ತುಳುಕಿತು. ತಲೆಯನ್ನು ತಿರುಗಿಸಿ ರಸ್ತೆಯನ್ನು ನೋಡಿ ಗಾಡಿ ನಡೆಸಿದ.

ಹುಡುಗಿಯ ಪಕ್ಕದಲ್ಲಿ ಕೂತಿದ್ದ ಮುದುಕರೊಬ್ಬರು ಯಾರೊಂದಿಗೋ ಹೇಳುತ್ತಿದ್ದರು. ಹುಡುಗಿ ಲಿಂಗಾಯಿತರವಳಂತೆ. ಕೊಪ್ಪಕ್ಕಾಚೆ ನಾರ್ವೆ

ಯಿಂದ ಬಂದಿದ್ದರು. ಅವಳಿಗಿನ್ನೂ ಮದುವೆ ಆಗಿರಲಿಲ್ಲ. ಸರಿಯಾದ ವರ ಸಿಕ್ಕಿರಲಿಲ್ಲ. ಮುದುಕರು ಹುಡುಗಿಯ ತಂದೆ. ತಕ್ಕಮಟ್ಟಿಗೆ ಗದ್ದೆ-ತೋಟ ಇತ್ತು. ನಾರ್ವೆ, ಮರಿತೊಟ್ಟಲು ಈ ಊರುಗಳಲ್ಲಿ ಒಬ್ಬಿಬ್ಬರು ಹುಡುಗರಿದ್ದರು. ಹುಡುಗಿ ಒಪ್ಪಲಿಲ್ಲ. ಹುಡುಗನಿಗೆ ಸ್ವತಂತ್ರವಾಗಿ ಜೀವನ ಮಾಡಲು ಸಂಬಳವೋ ಸಾರಿಗೆಯೋ ನೆಲವೋ ಮಠವೋ ಇದ್ದರೆ ಸಾಕು. ಹುಡುಗನೂ ಲಕ್ಷಣವಾಗಿರಬೇಕು. ಅಂಥ ಹುಡುಗ ಇನ್ನೂ ದೊರಕಿರಲಿಲ್ಲ. ತನಗೊಪ್ಪಿದ ವರ ದೊರಕುವತನಕ ಮದುವೆ ಮಾಡಿಕೊಳ್ಳೊಲ್ಲವೆಂದು ಹುಡುಗಿ ಹಠ ತೊಟ್ಟಿದ್ದಳಂತೆ.

ಹುಡುಗಿಯು ತಮ್ಮ ಮತದವಳೆಂದು ಕೇಳಿ ಭದ್ರಯ್ಯನಿಗೆ ಅವಳಲ್ಲಿ ಪ್ರಣಯದಾಸೆ ಹುಟ್ಟಿತು.

"ನಿಮ್ಮ ಹೆಸರೇನು ಕಣ್ರಿ?" ಮುದುಕರ ಕಡೆ ತಿರುಗಿನೋಡಿ ಕೇಳಿದ.

"ಲಿಂಗೇ ಗೌಡ್ರು"

"ಚಿಕ್ಕಮಗಳೂರಿಗೆ ಹೋಗ್ತಾ ಇದೀರೇನು ?"

"ಇಲ್ಲ, ನಿಮ್ಮದಾವೂರು ?"

ಇಷ್ಟರಲ್ಲಿ ಹುಡುಗಿಯು ಕುತೂಹಲದಿಂದ ಭದ್ರಯ್ಯನನ್ನು ನೋಡುತ್ತಿತ್ತು. ಭದ್ರಯ್ಯನೂ ಅವಳನ್ನು ನೋಡುತ್ತ ಹೇಳಿದ: "ನಮ್ಮದು ಚಿಕ್ಕಮಗಳೂರು. ನಮ್ಮಯ್ಯನವರು ಕಾಫಿ ವ್ಯಾಪಾರ ಮಾಡುತ್ತಿದ್ದರು. ಶಂಭುಲಿಂಗಯ್ಯನವರೂಂತ ನೀವು ಕೇಳಿರಬಹುದು."

ಲಿಂಗೇಗೌಡರು ಭದ್ರಯ್ಯನನ್ನು ಆಸಕ್ತಿಯಿಂದ ನೋಡಿದರು. ಅವನದು ಒಳ್ಳೆಯ ಮೈಗಟ್ಟು, ಗಂಭೀರವಾದ ಮುಖ.

"ಈಗ ಯಾರು ನೋಡ್ತಿದಾರಪ್ಪ ಕಾಫೀ ವ್ಯಾಪಾರ ?"

"ಅದೊಂದು ದೊಡ್ಡ ಕತೆ ಬಿಡಿ. ನಮ್ಮಯ್ಯನವರಿಗೂ ಅವರ ದಾಯಾದಂದಿರಿಗೂ ಆಸ್ತಿ ವಿಷಯ ಜಗಳ ಬಂತು. ಕೋರ್ಟು ಕಚೇರಿಗೆಲ್ಲ ಹೋಯಿತು. ಕೆಳಗಿನ ಕೋರ್ಟಿನಲ್ಲಿ ನಮ್ಮ ಕಡೆ ಆಯಿತು. ಅಪೀಲಿನಲ್ಲಿ ಅವರ ಕಡೆ ತೀರ್ಪು ಕೊಟ್ಟರು. ಆಸ್ತಿಯೆಲ್ಲ ಕಳೆಯಿತು. ನಮ ತಂದೆ ವ್ಯಾಪಾರವನ್ನೆಲ್ಲ ಬಿಟ್ಟುಬಿಟ್ಟರು. ಅದೇ ಕೊರಗಿನಲ್ಲಿ ಅವರು ತೀರಿಕೊಂಡರು. ನಾನೊಬ್ಬನೇ ಗಂಡುಮಗ. ಈಗ ನಮ್ಮನೇಲಿ ನಾನು

ನಮ್ಮ ತಾಯಿ ಇಬ್ಬರೇ. ನನಗೂ ಎಪ್ಪತ್ತು ಎಂಭತ್ತು ರೂಪಾಯಿ ಸಂಬಳ ಸಿಗುತ್ತೆ; ಜೀವನ ಮಾಡಿಕೊಂಡಿದೇವೆ."

ರಸ್ತೆಯ ಕಣಿವೆಯನ್ನಿಳಿದು ಕೆಳಕ್ಕೆ ಹೋಗುತ್ತಿತ್ತು. ಭದ್ರಯ್ಯ ಬ್ರೇಕನ್ನೆಳೆದು ಪೆಟ್ರೋಲ್ ಬಿಗಿಸಿದ. ರಸ್ತೆಗನುಸಾರವಾಗಿ ಗಾಡಿಯನ್ನು ತಿರುಗಿಸುತ್ತಿದ್ದ. ಹಿಂದುಗಡೆ ಮುದುಕನೂ ಹುಡುಗಿಯೂ ಮೆಲುದನಿಯಲ್ಲಿ ಮಾತಾಡುತ್ತಿದ್ದರು.

" ಏನು ಹೇಳ್ತೀಯವ್ವ ? " ಲಿಂಗೇಗೌಡರ ಪ್ರಶ್ನೆ.

" ಹ್ಞೂ " ಹುಡುಗಿಯ ರಾಗ.

ಭದ್ರಯ್ಯ ಮೆಲ್ಲನೆ ತಿರುಗಿ ನೋಡಿದ. ಹುಡುಗಿಯೂ ಒಂದು ಕ್ಷಣ ಅವನನ್ನು ನೋಡಿದಳು. ತಕ್ಷಣ ನಸುನಗುತ್ತ ತಲೆ ತಗ್ಗಿಸಿಬಿಟ್ಟಳು.

ಭದ್ರಯ್ಯನಿಗೆ ಹಿಡಿಸಲಾರದಷ್ಟು ಸಂತೋಷ. ಗಾಡಿಯನ್ನು ಅಲ್ಲಿಂದಲ್ಲಿಯೇ ಬಿಟ್ಟು ಹುಡುಗಿಯನ್ನು ಬರಸೆಳೆದು ಹೊತ್ತುಕೊಂಡ ರಸ್ತೆಯ ಪಕ್ಕದಲ್ಲಿ ಕೆಳಗೆ ಹರಿಯುತ್ತಿದ್ದ ತೊರೆಯಲ್ಲಿ ಧುಮುಕಿ ಈಸಾಡಿ ಕುಣಿದಾಡೋಣವೆನ್ನಿಸಿತು. ಗಂಡು ಹೆಣ್ಣುಗಳ ಜೀವಿತದಲ್ಲಿ ಎಂದಾದರೊಂದುದಿನ ಪರಸ್ಪರ ನೈಜಪ್ರೇಮವು ಅಂದು ಒಮ್ಮೆಲೇ ಅವನ ಎದೆಯಲ್ಲಿ ಚಿಮ್ಮಿ ಬಂದಿತು. ಆ ಹುಡುಗಿಯು ಅವನ ಎದೆಯನ್ನು ಪಕ್ಕನೆ ಹಿಡಿದಿದ್ದಳು. ಅವಳು ಕಡೆಯಬಾರಿ ನೋಡಿದ ಒಂದೇ ಒಂದು ನೋಟದಲ್ಲಿ ತನ್ನ ಸರ್ವಸ್ವವನ್ನೂ ಅವನಿಗೆ ಧಾರೆ ಯೆರೆದು ಬಿಟ್ಟಿದ್ದಳು. ಈ ತ್ಯಾಗದ ವಿದ್ಯುತ್ತು ಅವಳ ಕಣ್ಣಿಂದ ಹೊಳೆದು ಭದ್ರಯ್ಯನ ಎದೆಯಲ್ಲಿ ನಾಟಿ ಅವನ ಮೈಯನ್ನು ತರಗೆಲೆಯಂತೆ ಅಲ್ಲಾಡಿಸಿಬಿಟ್ಟಿತು. ತಾನೆಲ್ಲಿದೇನೆಂಬುದು ಅವನ ಅರಿವಿಗೆ ಬರಲಿಲ್ಲ. ಬಸ್ಸು ಕಣಿವೆಯ ರಸ್ತೆಯಲ್ಲಿ ಕೆಳಕೆಳಕ್ಕೆ ಹೋಗುತ್ತಿದೆಯೆಂದು ಅವನಿಗೆ ಮರೆತುಹೋಯಿತು. ರಸ್ತೆಯು ಥಟ್ಟನೆ ಬಲಕ್ಕೆ ತಿರುಗುತ್ತೆಂದು ಮರೆತುಹೋಯಿತು. ತನ್ನ ಭಾವೀ ಪತ್ನಿಯನ್ನು ನೋಡುವುದೊಂದೇ ಅವನ ಆಸೆ. ಅವಳನ್ನು ಇನ್ನೊಂದುಬಾರಿ ನೋಡಿ, ಅವಳೂ ತನ್ನನ್ನು ನೋಡುವ ಆನಂದವನ್ನನುಭವಿಸಬೇಕೆಂಬುದೊಂದೇ ಅವನ ಬಯಕೆ. ಅವನು ನಸುನಕ್ಕ. ಅವಳೂ ನಕ್ಕಳು. ಇಬ್ಬರ ಕಂಗಳೂ ಒಂದಾದವು.

ಇಬ್ಬರ ನಗೆಯೂ ಒಂದಾಯ್ತು. ಗಾಡಿಯು ರಸ್ತೆಯ ಕೊನೆಗೆ ಹೋಗಿ ಅಲ್ಲಿ ಕಟ್ಟಿದ್ದ ಮೋಟು ಸೇತುವಿಗೆ ಢಿಕ್ಕಿ ಹೊಡೆಯಿತು.

ರಸ್ತೆಗೆ ಆ ಕಡೆ ಎತ್ತರವಾದ ಬೆಟ್ಟ. ಈ ಕಡೆ ಆಳವಾದ ಕಣಿವೆ. ರಸ್ತೆಯಿಂದ ಅಕಸ್ಮಾತ್ತಾಗಿ ಉರುಳಿಬಿದ್ದರೆ ಗುರುತು ಸಿಗದಹಾಗೆ ಎಲುಬುಗಳೆಲ್ಲ ಮುರಿದು ಹೋಗುವುವು. ರಸ್ತೆಯು ತಿರುಗುವಾಗ ಗಾಡಿಗಳಿಗೆ ಅಪಾಯವಾಗದಿರಲೆಂದು ಅಂಚಿನಲ್ಲಿ ಮೋಟಾದ ಗೋಡೆಗಳನ್ನು ಕಟ್ಟಿದ್ದರು.

ಬಸ್ಸು ಗೋಡೆಗೆ ಢಿಕ್ಕಿ ಹೊಡೆದಾಗ ಭದ್ರಯ್ಯ ಕಣ್ಣುಬಿಟ್ಟು ತಲೆ ತಿರುಗಿಸಿ ನೋಡಿದ. ಇನ್ನೊಂದು ಕ್ಷಣಕ್ಕೆ ಗಾಡಿಯು ಅಂತರಾಳದಲ್ಲಿ ಬಿದ್ದು ಹೋಗುತ್ತಿತ್ತು. ಜನಗಳೆಲ್ಲ 'ಅಯ್ಯೋ' ಎಂದರು. ಭದ್ರಯ್ಯ ಹಿಂದಿನ ಬ್ರೇಕನ್ನೊತ್ತಿದ. ಮುಂದಿನ ಬ್ರೇಕನ್ನೊತ್ತಿದ. ಕೈ ಚಕ್ರವನ್ನು ತಿರುಗಿಸಿ ತಿರುಗಿಸಿ ತಿರುಗಿಸಿದ. ಗಾಡಿಯ ಒಂದು ಪಕ್ಕದ ಚಕ್ರಗಳು ರಸ್ತೆಯ ಮೇಲೆಯೇ ಉರುಳಿಕೊಂಡು ಹೋದವು. ಇನ್ನೊಂದು ಪಕ್ಕದ ಚಕ್ರಗಳು ಗೋಡೆಯಮೇಲೆ ಉರುಳಿಕೊಂಡು ಬಂದು, ಗೋಡೆಯು ಮುಗಿದನಂತರ ಆಧಾರವಿಲ್ಲದೆಯೇ ಉರುಳುತ್ತ ಹೋದವು. ಬಸ್ಸಿನಲ್ಲಿ ಕೂತಿದ್ದ ಕೆಲವರು ಈ ಕಡೆ ಕೆಲವರು ಆ ಕಡೆ ಕೆಳಗುರುಳಿ ಬಿದ್ದರು. ಕೆಲವರಿಗೆ ಕೈ ಮುರಿಯಿತು, ಕೆಲವರಿಗೆ ಕಾಲೊಡೆಯಿತು. ಮತ್ತೆ ಕೆಲವರಿಗೆ ಮೈ ತರಿದುಹೋಯಿತು. ಬಸ್ಸನ್ನು ಮಾತ್ರ ನಿಲ್ಲಿಸಲಾಗಲಿಲ್ಲ. ಕೆಳ ಕೆಳಗೆ ಹೋಗುತ್ತಲೇ ಇತ್ತು. ಆ ಮೇಲೆ ರಸ್ತೆಯು ಇನ್ನೊಂದುಸಲ ಬಲಗಡೆಗೆ ಹಠಾತ್ತಾಗಿ ತಿರುಗಿತು. ಅದಕ್ಕೆ ಸರಿಯಾಗಿ ಬಸ್ಸನ್ನು ತಿರುಗಿಸಲು ಭದ್ರಯ್ಯ ಎಷ್ಟೋ ಸಾಹಸಪಟ್ಟ. ಅವನ ಕೈಯಲ್ಲಾಗಲಿಲ್ಲ. ರಸ್ತೆಯ ಅಂಚಿಗೆ ಬಂದುಬಿಟ್ಟಿತು. ಕಡೆಗೆ ಮುಂದಿನ ಬ್ರೇಕನ್ನು ಬಲವಾಗಿ ಒತ್ತಿದ. ಗಾಡಿಯು ಥಟ್ಟನೆ ನಿಂತು ಒಂದೇ ಲಾಗಹಾಕಿತು. ಕೆಳಗಡೆ ಅಂತರಾಳ. ಹಿಂದೆ ಕೂತಿದ್ದ ಕಂಡಕ್ಟರು ಕೂತಿದ್ದಂತೆಯೇ ತಲೆಕೆಳಗಾಗಿ ಬಿದ್ದ. ಕೆಳಗಡೆ ಕಲ್ಲುಬಂಡೆಗೆ ತಲೆ ತಗಲಿ ಚೂರು ಚೂರಾಗಿ ಒಡೆದು ಹೋಯಿತು. ಬಸ್ಸಿನಲ್ಲಿ ಕೂತ ಇತರ ಜನರೆಲ್ಲ ದಿಕ್ಕುಪಾಲಾಗಿ ಚೆಲ್ಲಿ ಹೋದರು. ಒಬ್ಬಿಬ್ಬರು ಮಾತ್ರ ಪ್ರಯಾಸದಿಂದ ಬದುಕಿ ಬಂದರು. ಉಳಿದವರೆಲ್ಲ ಮೃತರಾದರು. ಭದ್ರಯ್ಯನಿಗೆ ಬಸ್ಸಿನ ಮುಂದುಗಡೆ ಹಾಕಿದ್ದ ಗಾಜು ಒಡೆದು

ಅವನ ಮೇಲೆ ಸಿಡಿದು ಹೊಟ್ಟೆಯನ್ನು ಸೀಳಿ ಮೈಯನ್ನೆಲ್ಲ ರಕ್ತಮಾಡಿತು. ಅವನ ಕೈಯಲ್ಲಿದ್ದ ಚಕ್ರವು ಹೊಟ್ಟೆಯಲ್ಲಿ ಹೊಕ್ಕು ಕರುಳನ್ನು ಬಗೆದು ಹಾಕಿಬಿಟ್ಟಿತು.

ಬಸ್ಸು ಪುಡಿ ಪುಡಿಯಾಗಿ ಜಜ್ಜಿಬಿತ್ತು. ಭದ್ರಯ್ಯ ಗಾಡಿಯಿಂದ ನುಸುಳಿಕೊಂಡು ನೀರಿನ ತೊರೆಯಲ್ಲಿ ಜಾರಿಹೋಗುತ್ತ ಕೊನೆಗೊಂದು ಗಿಡದ ಬುಡಕ್ಕೆ ತಗುಲಿಕೊಂಡ. ಸ್ವಲ್ಪ ಹೊತ್ತಿನಲ್ಲಿ ಅಲ್ಲೆಲ್ಲಿಯೋ ಬಿದ್ದಿದ್ದ ಹುಡುಗಿಯ ದೇಹವೂ ಜಾರಿಕೊಂಡು ಬಂದು ಅವನನ್ನು ಸೇರಿತು. ಇಲ್ಲಿ ಜೀವರಹಿತವಾದ ಅವರಿಬ್ಬರ ದೇಹವು ಸೇರಿದಂತೆ, ಜೀವಂತವಾದ ಅವರಿಬ್ಬರ ಆತ್ಮವೂ ಸೇರಿ ಮೇಲೆ ಮೇಲೆ ಏರಿಹೋಯಿತು.

*

# ಕಂಡದ್ದು ಆರುದಿನ



ಜೆಸ್ಸಿಯ ಗಂಡ ಕುಡಕನೆಂದರೆ ಕುಡಕ. ಸೀಸೆಗಟ್ಲೆ ಕುಡಿದರೂ ಮತ್ತೇರುತ್ತಿರಲಿಲ್ಲ. ಆಫೀಸರನ್ನು ನೋಡಲಿಕ್ಕೋ ಮುಖ್ಯವಾದ ಕೇಸುಗಳನ್ನು ತನಿಖೆಮಾಡಲಿಕ್ಕೋ ಹೋಗುವ ಮುನ್ನ ಒಂದೆರಡು ಸೀಸೆ ಒಡೆದು ಉರಳಿಸಬೇಕು. ಆಗತಾನೇ ಆವನ ಬುದ್ಧಿ ಹರಿತವಾಗುವುದಂತೆ! ಇಸ್ಪೀಟು ಆಟಕ್ಕೆ ಕೂತಾಗಲೂ ವೇಶ್ಯೆಯರ ಮನೆಗೆ ಹೊದಾಗಲೂ ಇವುಗಳಿಗ ಲೆಖ್ಖವೇ ಇಲ್ಲ.

ಅವನು ಇಸ್ಪೀಟು ಆಟದಲ್ಲಿ ಹೇರಳವಾಗಿ ಹಣ ಸಂಪಾದಿಸಿದ್ದ; ಹೇರಳವಾಗಿ ಕಳೆದುಕೊಂಡೂ ಇದ್ದ. ಅವನು ಪೋಲೀಸು ಸಬ್-ಇನ್ಸ್ಪೆಕ್ಟರು. ಒಳ್ಳೆಯ ಸಂಬಳ, ಸಂಬಳಕ್ಕೆ ನಾಲ್ಕೈದರಷ್ಟು ಮೇಲ್ವರಮಾನ. ಕುಟುಂಬ ದೊಡ್ಡದಲ್ಲ, ಗಂಡ – ಹಂಡತಿ. ಮಕ್ಕಳು ಮರಿಗಳಿಲ್ಲ. ಜೆಸ್ಸಿಯೇ ಹೆಂಡತಿ, ಜೆಸ್ಸಿಯೇ ಮಗು.

ಜೆಸ್ಸಿ ಗಂಡನ ಮನಗೆ ಬಂದ ಹೊಸದರಲ್ಲಿ ಬೇಕು ಬೇಕಾದಂತೆ ಸೀರೆ ಉಡುತ್ತಿದ್ದಳು; ಬೇಕುಬೇಕಾದಂತ ಒಡವೆ ಮಾಡಿಸಿಕೊಂಡಿದ್ದಳು. ಈಗ ಇದೆಲ್ಲ ಗತವೈಭವ—ಒಂದಾನೊಂದು ಕಾಲದ ಮಾತು. ಕುಡುಕ ಗಂಡನ ಕೆಟ್ಟಚಾಳಿಯಿಂದ ಒಡವೆಗಳು ನಿಲ್ಲಲಿಲ್ಲ. "ಅರ್ಜೆಂಟಾಗಿ ಮೈಸೂರಿಗೆ ಹೋಗಿ ಬರಬೇಕು ಕಣ–ತಲ ಹೋಗುವಂತ ಸಮಯ. ಹದಿನೈದು ರೂಪಾಯಿ ಕೊಡು." ಎಂದು ಅಂಗಲಾಚಿ ಬೇಡುವ.

"ನಾನೇನು ಮಾಡಲಿ? ಸಂಬಳ ಬಂದೊಡನೆ ವಿನಿಯೋಗಿಸಿ ಬರುತ್ತೀರಲ್ಲ—ಚಂದ್ರಮ್ಮನಿಗಷ್ಟು ನಾಗರತ್ನನಿಗಷ್ಟು ಅಂತ! ಅವರನ್ನು ಕೇಳಿದರೆ ಕೊಟ್ಟಾರು. ಚಿಲ್ಲರೆ ಖರ್ಚಿಗಿಟ್ಟುಕೋ ಅಂತ ನನಗೆ ಒಂದು ಕಾಸೂ ಕೊಡೋಲ್ಲ, ನಾನೆಲ್ಲಿಂದ ತರಲಿ ಹೇಳಿ?"

"ಎಲ್ಲಾದರೂ ತಂದು ಕೊಡೆ. ಇನ್ನು ಮೇಲೆ ಸಂಬಳ ಬಂದ ತಕ್ಷಣ ನಿನ್ನ ಕೈಲಿ ನಲವತ್ತು ರೂಪಾಯಿ ಕೊಟ್ಟುಬಿಡುತ್ತೇನೆ. ತಿಂಗಳಿಗೆ ನಲವತ್ತು ರೂಪಾಯಿ ಆದರೆ ವರ್ಷಕ್ಕೆ ಎಷ್ಟೊಂದು ಹಣವಾಯ್ತು ನೋಡು!

ನಾನ್ನೂರ ಎಂಭತ್ತು ರೂಪಾಯಿ ! ನಾನ್ನೂರ ಎಂಭತ್ತು ರೂಪಾಯಿ ಕಣೆ ! ”

“ ಸರಿ ಸರಿ, ಬಾಯಲ್ಲಿ ಹೇಳುವುದಕ್ಕೇನು ? ನಾನೂರ ಎಂಭತ್ತೂ ಬಂದೀತು, ನಾಲ್ಕುಸಾವಿರದ ಎಂಟು ನೂರೂ ಬಂದೀತು. ಕೈ ಮೇಲೆ ಬಿದ್ದಾಗಲ್ಲವೇ ಅದರ ಮಾತು ! ಇಂಥ ಸವಿಮಾತುಗಳಿಂದ ಜೇನು ಸುರಿಸಿ ತಾನೇ ಹೋದ ಹೋದಲ್ಲಿ ಸಂಸಾರಗಳನ್ನು ಕೆಡಿಸಿದೀರ ? ”

“ ನೋಡು ನೋಡು. ಆ ಮಾತು ಎತ್ತಬೇಡಾ ಅಂತ ಎಷ್ಟು ಸಲ ನಿನಗೆ ಹೇಳಲಿ ? ಇನ್ನುಮೇಲೆ ಹೋಗೋದಿಲ್ಲ ಕಣೆ ಅಂದರೆ ಹೋಗೋಲ್ಲ. ಈ ಸಲ ಸಂಬಳ ಬರಲಿ ನೋಡು, ಒಂದುಕಾಸು ಕೂಡ ಹೋಗಲಾಡಿಸೋಲ್ಲ ಬಂದ ದುಡ್ಡನ್ನೆಲ್ಲ ನಿನ್ನ ಕೈಲಿ ಕೊಡುತ್ತೇನೆ. ಬೆಳಿಗ್ಗೆ ಒಂದು ಸಿಗರೇಟು- ರಾತ್ರಿ ಒಂದು ಸೀಸೆ—ಇಷ್ಟೇ ನನ್ನವೆಚ್ಚ. ಉಳಿದದ್ದೆಲ್ಲ ನಿನ್ನ ಕೈಲಿ ಗಂಟು.

ಹೀಗೆ ಬೆಣ್ಣೆ ಬೆಣ್ಣೆಯಾಗಿ ಮಾತಾಡಿ ಜೆಸ್ಸಿಯ ಮನಸ್ಸನ್ನು ಕರಗಿಸಿ ದನು. ಅವಳು ಅಲ್ಲಿಷ್ಟು ಇಲ್ಲಿಷ್ಟು ಪುಡಿಗಾಸುಗಳನ್ನು ಸೇರಿಸಿಟ್ಟದ್ದಳು. ಅದನ್ನು ತೆಗೆದುಕೊಂಡು ಹೋಗುವನು. ಅದಿಲ್ಲದಿದ್ದರೆ ಕೈ ಬಳೆಯನ್ನೋ ಕೊರಳ ಚೈನನ್ನೋ ಕಸಿದುಕೊಂಡು ಹೋಗುವನು. ಅನೇಕವೇಳೆ ಜೆಸ್ಸಿ ಇವನ ಮಾತಿಗೆ ಮರುಳಾಗದೆ ಹಠಹಿಡಿಯುವಳು. ಆಗಂತೂ ಜೆಸ್ಸಿಯ ಗತಿ ಬೇಡ. ಛಡಿಯನ್ನು ತೆಗೆದು ನಾಲ್ಕೇಟು ಬಿಗಿಯುವನು. ಏಟು ತಿಂದಾದರೂ ಒಡವೆಗಳನ್ನೇಕೆ ಇಟ್ಟುಕೊಳ್ಳಬೇಕೆಂದು ರೋಷದಿಂದ ಅವುಗ ಳನ್ನತ್ತ ಕಳಚಿ ಹಾಕುವಳು.

“ ಒಳ್ಳೇಮಾತಿನಲ್ಲಿ ಕೇಳಿದಾಗಲೇ ಕೊಟ್ಟಿದ್ದರೆ ಇಷ್ಟುಏಟು ಉಳಿಯ್ತು ತ್ತಿತ್ತಲ್ಲ—ಹುಚ್ಚುಹುಡುಗಿ, ಹುಚ್ಚು ಹುಡುಗಿ. ನಾನು ನಾಳೆ ಮಧ್ಯಾಹ್ನದ ರೈಲಿಗೆ ವಾಪಸು ಬಂದು ಬಿಡುತ್ತೇನೆ, ಮನೆಯಲ್ಲಿ ಜೋಪಾನ ” ಎನ್ನುತ್ತ ಕೆನ್ನೆಯನ್ನು ಮೃದುವಾಗಿ ಚಿವುಟಿ ಹೊರಗೆ ಹೋದನು.

ಜೆಸ್ಸಿ ಅವನು ಹೋಗುವುದನ್ನೇ ನೋಡುತ್ತ ಬಿಕ್ಕಿ ಬಿಕ್ಕಿ ಅತ್ತಳು. ಅವನು ಮೈಸೂರಿಗೆ ಹೋಗುವುದಿಲ್ಲವೆಂದು ಅವಳಿಗೆ ದೃಢವಾಗಿ ಗೊತ್ತು. ಚಂದ್ರಮ್ಮನ ಪಡಸಾಲೆಯಲ್ಲೋ ನಾಗರತ್ನಳ ಉಪ್ಪರಿಗೆಯಲ್ಲೋ ಕೂತು ಇಸ್ಪೀಟಾಡುವನೆಂದು ಗೊತ್ತು. ತನ್ನ ಒಡವೆಗಳೆಲ್ಲ ಅವನ

ಬಾಳುಗೆಟ್ಟ ನಡತೆಗೆ ಮೀಸಲಾಯಿತೆಂದು ಅವಳು ನೆನೆಸಿ ನೆನೆಸಿ ಅತ್ತಳು. ಇವುಗಳ ಫಲವಾಗಿ ಅವನ ಮೈ ತುಂಬ ಖಾಯಿಲೆ. ತನ್ನ ಯೌವನವನ್ನು ಅವನೊಂದಿಗೆ ಕಳೆಯಬೇಕು. ಉಸಿರೆತ್ತಿ ಮಾತಾಡಿದರೆ ರುದ್ರಕೋಪ ದಿಂದ ಛಡಿಯೇಟು ಬೀಳುವುದು. ಮಡುಲಲ್ಲೊಂದು ಮಗುವಿದ್ದರೆ ಈ ದುಃಖವೆಲ್ಲ ಹೇಗಾದರೂ ಮರೆಯಬಹುದು. ಮಗುವಿನ ಹೆಸರಿನಲ್ಲಿ ಗಂಡನ ಪ್ರೇಮವನ್ನು ಸೆಳೆಯಬಹುದು. ಪ್ರಾರಬ್ಧಕರ್ಮ; ಮದುವೆಯಾಗಿ ನಾಲ್ಕು ವರ್ಷವಾದರೂ ಮಕ್ಕಳು ಹುಟ್ಟಲಿಲ್ಲ. ಹೊಟ್ಟೆಗಿಲ್ಲದೆ ಬಟ್ಟೆಗಿಲ್ಲದೆ ಅಲೆಯುವವರಿಗೆ ದೇವರು ಮುದ್ದು ಮುದ್ದಾದ ಮಕ್ಕಳನ್ನು ಕೊಡುತ್ತಿದ್ದ. ರೂಪು ಲಾವಣ್ಯಗಳು ಶೂನ್ಯವಾದ ಹೆಣ್ಣುಮಕ್ಕಳಿಗೆ ಗುಣಸಂಪನ್ನರಾದ ಗಂಡಂದಿರನ್ನು ಕೊಡುತ್ತಿದ್ದ. ಜೆಸ್ಸಿಗೆ ರೂಪು ಲಾವಣ್ಯದಲ್ಲಿ ಕೊರತೆಯಿಲ್ಲ; ಹೊಟ್ಟೆ ಬಟ್ಟೆಗೆ ಕೊರತೆಯಿಲ್ಲ. ಆದರೆ ಪೂರ್ವಜನ್ಮದಲ್ಲಿ ಎಷ್ಟು ಸಂಸಾರ ಗಳನ್ನೊಡದು ಎಷ್ಟುಮಕ್ಕಳನ್ನು ಕೊರಳು ಕಿವಿಚಿದ್ದಳೋ! ದುಷ್ಟ ಗಂಡ ನೊಂದಿಗೆ ಬಂಜೆಯಾಗಿ ಬಾಳಬೇಕೆಂದು ನಿಷ್ಕರುಣೆಯಾದ ದೇವರು ಹಣೆ ಯಲ್ಲಿ ಬರೆದಿದ್ದ.

ಹೀಗೆ ದುಃಖಿಸುತ್ತ ಜೆಸ್ಸಿ ಹಿತ್ತಲ ನಲ್ಲಿಯ ಬಳಿ ನಿಂತು ಎದುರು ಮಹಡಿಯ ಕಿಟಕಿಯ ಕಡೆ ನೋಡುವಳು. ಅಲ್ಲಿ ರಾಜು ಆಗಾಗ ನಿಂತು ಕೊಳ್ಳುತ್ತಿದ್ದ. ರಾಜು ತಾಲ್ಲೂಕು ಕಚೇರಿ ಗುಮಾಸ್ತೆ. ಅವನ ಮನೆ ಯಲ್ಲಿ ಅವನು, ಅವನ ಎಳೆಯ ಹೆಂಡತಿ ಮತ್ತು ಎಳೆಯ ಮಗು—ಮೂರೇ ಜನ. ಸದಾ ನಗುತ್ತ ನಲಿಯುತ್ತಿದ್ದ ಮುದ್ದಾದ ಚಿಕ್ಕ ಸಂಸಾರ. ಎಳೆಯ ಮಗುವನ್ನೆತ್ತಿಕೊಂಡು ಕಿಟಕಿಯ ಬಳಿ ರಾಜು ನಿಂತಾಗ ಜೆಸ್ಸಿ ಬೇಕು ಬೇಕಂತಲೇ ನಲ್ಲಿ ಬಳಿ ಬರುವಳು. ಚೆಂಬಿನಲ್ಲಿ ನೀರನ್ನು ಹಿಡಿದು ಹಿಡಿದು ಪಕ್ಕದ ತೊಟ್ಟಿಯಲ್ಲಿ ಸುರಿಯುವಳು. ಅಕ್ಕಿಯನ್ನೋ ಬೇಳೆಯನ್ನೋ ಪಾತ್ರೆಯಲ್ಲಿ ತೊಳೆಯುತ್ತ ನಿಂತುಕೊಳ್ಳುವಳು. ರಾಜುವಿಗೆ ಲಲಿತವಾದ ಸುಂದರ ಕಣ್ಣುಗಳು. ತಿಳಿಯಾದ ನಗುಮುಖ. ಅಂಥ ಗಂಡ ಜೆಸ್ಸಿಗೆ ದೊರೆತಿದ್ದರೆ ಎಷ್ಟು ಚೆನ್ನಾಗಿತ್ತು! ಅವನು ತನ್ನ ಗಂಡನಂತೆ ಭಾರಿ ಕೆಲಸಕ್ಕೆ ಸೇರಿ ಹೆಚ್ಚು ಸಂಬಳ ತರುತ್ತಿರಲಿಲ್ಲ. ಭಾರಿಯಾಗಿ ಸಂಪಾದಿಸು ತ್ತಿರಲಿಲ್ಲ. ತನ್ನ ಗಂಡನ ಹಾಗೆ ಕೆಟ್ಟ ಚಾಳಿಗಳನ್ನೂ ಕಲಿತಿರಲಿಲ್ಲ. ರಾಜು

ಕುಡುಕನಲ್ಲ, ಕಾಮುಕನಲ್ಲ. ತಾನಾಯ್ತು, ತನ್ನ ಕೆಲಸವಾಯ್ತು, ತನ್ನ ಕಿರಿಯ ಸಂಸಾರವಾಯ್ತು-ಇವುಗಳಲ್ಲಿ ತೃಪ್ತನಾಗಿ ಸಂತೋಷದಿಂದಿದ್ದ. ರಾಜುವಿನ ಮನೆಯಲ್ಲಿ ಕೆಲಸ ಮಾಡುತ್ತಿದ್ದ ಒಕ್ಕಲಗಿತ್ತಿಯಿಂದ ಈ ವಿಷಯ ಗಳನ್ನು ಕೇಳಕೇಳುತ್ತ ಜೆಸ್ಸಿ ನಿಟ್ಟುಸಿರುಬಿಟ್ಟಳು. ತಾನು ಬ್ರಾಹ್ಮಣಳಾಗಿ ಹುಟ್ಟಿ ರಾಜುವಂಥ ಗಂಡನನ್ನು ಕಟ್ಟಿಕೊಳ್ಳಬಾರದಾಗಿತ್ತೆ? ಅಥವಾ ರಾಜು ಕ್ರಿಸ್ತಮತಕ್ಕೆ ಸೇರಿ ತನ್ನನ್ನು ಕೈ ಹಿಡಿಯಬಾರದಾಗಿತ್ತೆ? ಎಂದು ಆಗದ ಹೋಗದ ಯೋಚನೆಯನ್ನು ಮಾಡಿದಳು.

ದಿನದಿನಕ್ಕೂ ಜೆಸ್ಸಿಗೆ ರಾಜುವಿನ ಮೇಲೆ ಭ್ರಮೆ ಹೆಚ್ಚಿತು. ಶ್ರೀರಾಮಪುರದ ರೈಲು ರಸ್ತೆಯ ಕೆಳಗೆ ಅವರ ಮನೆ. ರಾಜು ಮನೆಯಿಂದ ಕಚೇರಿಗೆ ಆ ಮಾರ್ಗವಾಗಿ ನಡೆದು ಹೋಗುತ್ತಿದ್ದ. ಆಗ ಜೆಸ್ಸಿ ತನ್ನ ರೂಮಿನ ಕಿಟಕಿಯಲ್ಲಿ ನಿಂತು ಅವನು ಹೋಗುವುದನ್ನೇ ನೋಡುವಳು. ಮತ್ತೆ ಆರೂಮುಕ್ಕಾಲು ಘಂಟೆಗೆ ಸರಿಯಾಗಿ ಅವನು ಹಿಂದಿರುಗಿ ಬರುವು ದನ್ನು ನೋಡುವಳು. ಅವನು ಮನೆಗೆ ಬಂದಕೂಡಲೆ ಮಹಡಿಯನ್ನು ಹತ್ತಿ ಅಂಗಿಯನ್ನು ಕಳಚಿಹಾಕುವ ಮುನ್ನ ಕಿಟಕಿಯಿಂದ ನೋಡುವನು. ಅಲ್ಲಿ ಜೆಸ್ಸಿ ಹಾಜರ್. ರಾಜು ಕೆಳಗಿಳಿದು ಹೋಗಿ ಕೈಕಾಲು ತೊಳೆದು ಕೊಂಡು ಕಾಫಿ ತಿಂಡಿ ತಿಂದು ಮಗುವನ್ನು ಆಡಿಸುತ್ತಾ ಮತ್ತೆ ಕಿಟಕಿಯ ಬಳಿ ಬಂದು ನಿಲ್ಲುವನು. ಜೆಸ್ಸಿ ಮನೆಯಲ್ಲಿದ್ದ ಪಾತ್ರೆಗಳನ್ನೆಲ್ಲ ನಲ್ಲಿಯ ಕೆಳಗೆ ಹಾಕಿ ನಾರಿನಿಂದ ತಿಕ್ಕುತ್ತ ಕೂಡುವಳು. ಇದಕ್ಕೆ ಮುಂಚೆ ಒಕ್ಕಲಗಿತ್ತಿ ತಿಕ್ಕಿ ತೊಳೆದಿಟ್ಟ ಪಾತ್ರೆಗಳವು. ಆದರೆ ಅವಳು ಶುದ್ಧವಾಗಿ ತೊಳೆದಿರಲಿಲ್ಲವಂತೆ! ಒರಟು ಒಕ್ಕಲಗಿತ್ತಿ! ಅವಳು ಮಾಡುವುದೆಲ್ಲ ಹಾಗೆಯೇ; ಸರಿಯಾಗಿ ಪಾತ್ರೆ ತಿಕ್ಕುವುದಿಲ್ಲ, ಹಿತ್ತಿಲ ಕಸವನ್ನು ಚನ್ನಾಗಿ ಹೊಡೆಯುವುದಿಲ್ಲ. ನಲ್ಲಿಯ ಕೆಳಗೆ ಎಷ್ಟೊಂದು ಮುಸುರೆ, ಕಸ, ಕಡ್ಡಿ! ತಿಂಗಳು ಹುಟ್ಟುವುದಕ್ಕೆ ಮುಂಚೆ ಸಂಬಳಕ್ಕೆ ಮಾತ್ರ ತಪ್ಪದೆ ಕೈ ಒಡ್ಡು ತ್ತಾಳೆ.

ಜೆಸ್ಸಿ ಪಾತ್ರೆಗಳನ್ನು ತೊಳೆದು ಒಂದೊಂದಾಗಿ ಮನೆಯೊಳಕ್ಕೆ ತೆಗೆದುಕೊಂಡು ಹೋಗುವಳು. ನಲ್ಲಿಯ ಸುತ್ತು ನಿಧಾನವಾಗಿ ಶುದ್ಧ ಮಾಡುವಳು. ಕ್ಷಣಕ್ಕೊಂದು ಸಲ ತಲೆಯೆತ್ತಿ ರಾಜುವನ್ನು ನೋಡುವಳು.

ಈ ವೇಳೆಗೆ ಕತ್ತಲಾಗುತ್ತಿತ್ತು. ರಾಜು ಸಂಧ್ಯಾವಂದನೆ ಮಾಡಲು ಒಳಗೆ ಹೊರಟು ಹೋಗುತ್ತಿದ್ದ. ಜೆಸ್ಸಿಯೂ ಸಹ ಕದಗಳನ್ನು ಮುಚ್ಚಿ ಒಳಕ್ಕೆ ಹೋಗುವಳು.

ರಾಜುವಿನ ಹೆಂಡತಿ ಕಾರಣಾಂತರದಿಂದ ತವರುಮನೆಗೆ ಹೋದಳು. ಅವರ ಮನೆಯಲ್ಲಿ ಅವನೊಬ್ಬನೆ. ಬೆಳಿಗ್ಗೆ ಹತ್ತು ಘಂಟೆಯಿಂದ ಸಂಜೆ ಆರರ ತನಕ ಕಚೇರಿಗೆ ಹೋಗಿ ಬರುವ ಕೆಲಸ. ಮಿಕ್ಕ ವೇಳೆಯಲ್ಲಿ ಮನೆಯಲ್ಲುಳಿಯುತ್ತಿದ್ದ. ಒಮ್ಮೊಮ್ಮೆ ಕಿಟಕಿಯ ಬಳಿ ನಿಲ್ಲುವನು. ಹಾಗೆ ನಿಂತಾಗೆಲ್ಲ ಜೆಸ್ಸಿ ಹಿತ್ತಲಿನಲ್ಲಿರುತ್ತಿದ್ದಳು. "ನನ್ನ ಜೀವನದ ಹೆಗ್ಗುರಿ ನೀವೆ" ಎಂದು ಹಿರಿಯಾಸೆಯಿಂದ ಅವನನ್ನು ನೋಡುತ್ತಿದ್ದಳು. ಹಿತ್ತಲಿನಲ್ಲಿ ನಿಲ್ಲುವುದಕ್ಕೆ ಕಾರಣವೊಂದೂ ಇಲ್ಲದಿದ್ದರೆ ಮಲ್ಲಿಗೆ ಗಿಡದಿಂದ ಹೂ ಕೊಯ್ಯುವುದೋ ತೊಳೆದ ಪಾತ್ರೆಗಳನ್ನು ಮತ್ತೆ ತೊಳೆಯುವುದೋ ಮಾಡುತ್ತಿದ್ದಳು.

ಒಂದು ಭಾನುವಾರ. ಜೆಸ್ಸಿಯ ಗಂಡ ಹೊಸಕೋಟೆಗೆ ಕ್ಯಾಂಪು ಹೋಗಿದ್ದ. ಅವಳು ಬೀದಿಯ ಬಾಗಿಲಿಗೆ ಅಗುಳಿ ಹಾಕಿ ಹಿತ್ತಲಿಗೆ ಬಂದಳು. ಬಾಗಿಲ ಮುಂದೆ ಮೆಟ್ಟಿಲ ಮೇಲೆ ಕೂತು, ಎರೆದುಕೊಂಡಿದ್ದ ತಲೆಗೂದಲಿನ ಸಿಕ್ಕು ಬಿಡಿಸುತ್ತ ಕೂತಳು. ಐದು ನಿಮಿಷ, ಹತ್ತು ನಿಮಿಷ, ಅರ್ಧ ಘಂಟೆ. ಜಾಗ ಬಿಟ್ಟು ಕದಲಲಿಲ್ಲ. ರಾಜು ಕಿಟಕಿಯ ಬಳಿ ಕುರ್ಚಿಹಾಕಿ ಕೈಲೊಂದು ಪುಸ್ತಕವನ್ನು ಹಿಡಿದು ಕೂತಿದ್ದ. ಅವನೂ ಜಾಗ ಬಿಟ್ಟು ಕದಲಲಿಲ್ಲ.

ಜೆಸ್ಸಿ ಮೆದುವಾಗಿ ನಕ್ಕಳು. ನಿಮಗಾಗಿ ಇಷ್ಟು ಹೊತ್ತು ಕಾದುಕೊಂಡಿದೇನಲ್ಲ ! ಎಂಬರ್ಥದಲ್ಲಿ ನಕ್ಕಳು.

ರಾಜುವಿನ ಮುಖದಲ್ಲೂ ನಗೆ ಮೂಡಿತು.

ಜೆಸ್ಸಿ ತಕ್ಷಣ ಎದ್ದಳು. ಕೂದಲನ್ನು ಗಂಟು ಹಾಕಿಕೊಂಡು ಒಳಕ್ಕೆ ಹೋದಳು. ಕೈಯಲ್ಲಿ ಕವರನ್ನು ಹಿಡಿದುಕೊಂಡು ಬಂದು ರಾಜುವಿಗೆ ತೋರಿಸಿದಳು. ಹಿತ್ತಿಲ ಬಾಗಿಲನ್ನು ತೆಗೆದು ಕಕ್ಕಸು ಗಲ್ಲಿಯಲ್ಲಿ ಯಾರಾದರೂ ಓಡಾಡುತ್ತಿದ್ದಾರೋ ಎಂದು ಅತ್ತಿತ್ತ ನೋಡಿದಳು. ಬೀದಿ ಗುಡಿಸು

ವವನು ಅಲ್ಲಿಲ್ಲೋ ಇದ್ದನೆಂದು ಕಾಣುತ್ತೆ. ಹಿಂತಿರುಗಿ ಬಂದು ಬಾಗಿಲು ಮುಚ್ಚಿ ಮೆಟ್ಟಿಲಮೇಲೆ ಕೂತಳು.

ರಾಜುವಿಗೆ ಎದೆ ಡವಡವನೆ ಹೊಡೆದಿತು. ಅವಳು ಬರೆದಿದ್ದ ಕಾಗದ ವನ್ನು ನೋಡಬೇಕೆಂದು ಕುತೂಹಲವು ಜಾಸ್ತಿಯಾಯಿತು. ಸರಸರನೆ ಮೆಟ್ಟಲಿಳಿದು ಹೋದ. ತನ್ನ ಮನೆಯ ಹಿತ್ತಿಲ ಬಾಗಿಲನ್ನು ತೆಗೆದು ನೋಡಿದ. ಝಾಡಮಾಲಿಯು ಹೊರಟು ಹೋಗುತ್ತಿದ್ದ. ಗಲ್ಲಿಯಲ್ಲಿ ಇನ್ನೊಬ್ಬರೂ ಸುಳಿದಾಡುತ್ತಿರಲಿಲ್ಲ.

ಆಗ ಜೆಸ್ಸಿಯು ಮೆಲ್ಲನೆ ಬಾಗಿಲು ತೆರೆದಳು. ಕೈಲಿದ್ದ ಕಾಗದವನ್ನು ರಾಜು ನೋಡುತ್ತಿದ್ದ ಹಾಗೆ ಬೀದಿಯಲ್ಲಿ ಬೀಸಿ ಮತ್ತೆ ಬಾಗಿಲನ್ನು ಮುಚ್ಚಿದಳು.

ಅವಳು ಬರೆದಿದ್ದ ಕಾಗದ ಅದ್ಭುತವಾಗಿತ್ತು. ರಾಜುವನ್ನು ಅಪಾರ ವಾಗಿ ವರ್ಣಿಸಿದ್ದಳು; ಅಪಾರವಾಗಿ ಹೊಗಳಿದ್ದಳು. ಪತ್ರಿಕೆಗಳಲ್ಲಿ ಬರುವ ಪ್ರೇಮ ಕತೆಗಳನ್ನು ಓದಿ ಸಂಪಾದಿಸಿದ್ದ ಜ್ಞಾನವನ್ನೆಲ್ಲ ಖರ್ಚುಮಾಡಿ ಆ ಪತ್ರವನ್ನು ಬರೆದಿದ್ದಳು. ಅವನನ್ನು ಕಂಡು ಮಾತಾಡಬೇಕೆಂದು ಹಗಲೂ ರಾತ್ರಿ ತಪಸ್ಸು ಮಾಡುತ್ತಿದ್ದಳಂತೆ. ಅವನೊಂದಿಗೆ ಒಂದು ದಿನವಾದರೂ ನಲಿದಾಡಿದರೆ ತನ್ನ ಜನ್ಮ ಸಾರ್ಥಕವಾಗುತ್ತಿತ್ತಂತೆ. ಅಂತಹ ಸುದಿನವು ಎಂದು ಬರುತ್ತೋ ಎಂತ ಹಾ ತೊರೆಯುತ್ತಿದ್ದಳಂತೆ.

ರಾಜು ಕಾಗದವನ್ನೋದಿದ; ಇನ್ನೊಮ್ಮೆ ಓದಿದ; ಮತ್ತೊಮ್ಮೆ ಓದಿದ. ಉಕ್ಕಿ ಬರುತ್ತಿರುವ ಸಂತೋಷದಲ್ಲಿ ಪ್ರೇಮವು ಮೈಯನ್ನು ನಡು ಗಿಸಿತು. ಜೆಸ್ಸಿ ಹತ್ತಿರವಿದ್ದಿದ್ದರೆ ಹಿಡಿದು ಹಿಸುಕಿಬಿಡುತ್ತಿದ್ದ. ಅವಳು ಅದೋ ಅಲ್ಲಿ ಹಿತ್ತಲಿನಲ್ಲಿ ಕೂತು ನಗುತ್ತಿದ್ದಳು. ರಾಜು ಅವಳ ಕಾಗದ ವನ್ನು ಹಿಸುಕಿ ಉಂಡೆ ಮಾಡಿದ. ಮತ್ತೆ ಅದನ್ನು ಬಿಚ್ಚಿ ಇನ್ನೊಂದು ಸಲ ಓದಿದ. ಕಡೆಯದಾಗಿ ಅವಳು ಬರೆದಿದ್ದಳು. "ನಾನು ನಿಮ್ಮನ್ನು ಪ್ರೀತಿಸುವುದನ್ನು ನಮ್ಮ ಮನೆಯುವರು ಕಂಡರೆ ನನ್ನನ್ನು ತುಂಡುತುಂಡು ಮಾಡಿಬಿಡುತ್ತಾರೆ !"

೦ ೦ ೦

ಆರು ತಿಂಗಳಿಂದ ಒಂದೇ ಸಮನೆ ಜಪಿಸುತ್ತಿದ್ದ ಅವಳ ಮಂತ್ರವು

ಫಲಿಸಿತು. ರಾಜುವಿನೊಡನೆ ಪ್ರೇಮಸುಖವನ್ನು ಆನಂದವಾಗಿ ಅನುಭವಿಸಿದಳು. ಅವನೊಡನೆ ಮಾತಾಡಿದ ಆರು ದಿನಗಳಲ್ಲಿ ಆರು ಲೋಕಗಳನ್ನೇರಿದಳು. ಆಗೊಂದು ದಿನ ಹೇಳಿದಳು—"ನಮ್ಮ ಮನೆಯವರು ಈಗ ನನ್ನನ್ನು ಕಂಡರೆ ಕಡಿದು ಹಾಕುತ್ತಾರೆ. ಕಡಿಯಲಿ, ತುಂಡುತುಂಡಾಗಿ ಕತ್ತರಿಸಿ ಬೇಯಿಸಿಕೊಂಡು ತಿನ್ನಲಿ! ನನ್ನ ಬಯಕೆಯಂತೂ ಈಡೇರಿತು ಇನ್ನು ನನಗೆ ಅವರಿಂದ ಏನಾಗಬೇಕು?"

ಆರು ದಿನಗಳಾದರೂ ಸುಖ ದೊರೆಯುತ್ತೆಂದು ಅವಳು ಎಣಿಸಿರಲಿಲ್ಲ. ಒಂದು ಬೆಳಿಗ್ಗೆ ಅವಳ ಗಂಡ ಸ್ಟೇಷನ್ನಿನಿಂದ ಬಂದು, "ಮೈಸೂರಿಗೆ ವರ್ಗಮಾಡಿದಾರೆ ಕಣೆ. ಮಧ್ಯಾಹ್ನ ಛಾರ್ಜು ಕೊಡಬೇಕು. ಸಾಯಂಕಾಲದ ರೈಲಿನಲ್ಲಿ ಮೈಸೂರಿಗೆ ಹೋಗಿ ಮನೆಗಿನೆ ನೋಡಿಕೊಂಡು ನಾಳೆನಾಳಿದ್ದು ತಿರುಗಿ ಬರುತ್ತೇನೆ. ಮನೆಕಡೆ ಜೋಪಾನ. ಒಕ್ಕಲಗಿತ್ತಿ ರಾತ್ರಿ ಬಂದು ಮಲಗಲು ಬರಹೇಳು" ಎಂದು ಹೇಳಿದ. ಅವಸರವಸರವಾಗಿ ಊಟಮಾಡಿ ಸ್ಟೇಷನ್ನಿಗೆ ಹೊರಟುಹೋದ.

ಜೆಸ್ಸಿಗೆ ಎಲ್ಲೆಯಿಲ್ಲದ ಸಂತೋಷ. ಈವತ್ತು ರಾತ್ರಿ, ನಾಳೆ ರಾತ್ರಿ ಎರಡು ದಿನ ರಾಜುವೊಂದಿಗೆ ಸುಖಪಡಬಹುದು.

ಹಿತ್ತಿಲಿಗೆ ಓಡಿಬಂದು ರಾಜುವಿನ ಕಿಟಕಿಯ ಕಡೆ ನೋಡಿದಳು. ಅವನು ಎರಡು ದಿನದಿಂದ ರಜದಮೇಲೆ ಊರಿಗೆ ಹೋಗಿದ್ದ. ಮುಚ್ಚಿದ ಕದ ತೆರೆದಿರಲಿಲ್ಲ. ಜೆಸ್ಸಿ ಕೈಕೈ ಹಿಸುಕಿಕೊಂಡು ಒಳಗೆ ಹೋದಳು. "ಅಯ್ಯೋ ದೇವರೆ! ಕೈ ತುತ್ತು ಬಾಯಿಗೆ ಬರವೊಲ್ಲದಲ್ಲ! ಈತ ಯಾವತ್ತು ಬರುತ್ತಾರೋ ಕಾಣೆ. ನಾನು ಮೈಸೂರಿಗೆ ತೊಲಗಿ ಹೋದ ಬಳಿಕ ಬಂದರೆ ಏನುಪಯೋಗ?....ಹ್ಞಾ, ಇವತ್ತು ಸಂಜೆ ರೈಲಿಗೆ ಬಂದರೂ ಬರಬಹುದು. ನೋಡೋಣ, ನನ್ನ ಅದೃಷ್ಟ" ಎಂದು ಸಮಾಧಾನ ಪಟ್ಟುಕೊಂಡು ಒಳಗೆ ಹೋದಳು. ಸಂಜೆಯಲ್ಲಿ ಹಿತ್ತಿಲಿನಲ್ಲಿ ಕೂತಳು. ಕಣ್ಣು ಕೋರೆಯುವ ತನಕ ರಾಜುವಿನ ಕಿಟಕಿಯ ಕಡೆ ನೋಡಿದಳು.

ಕಿಟಕಿ ತೆರೆಯಲಿಲ್ಲ. ರಾಜು ಬರಲಿಲ್ಲ.

ಮರುದಿನ ಜೆಸ್ಸಿ ಹಿತ್ತಿಲಿನಲ್ಲಿ ಕೂತು ಕೂತು ಅತ್ತಳು. ಮದುವೆಯು ಗೊತ್ತಾಗಿ ಮದುವೆಯ ದಿನ ಗಂಡು ಸತ್ತುಹೋದರೆ ಹೆಣ್ಣು ಕೂತು ಅಳು

ವಂತೆ ಜೆಸ್ಸಿ ಬಿಕ್ಕಿಬಿಕ್ಕಿ ಅತ್ತಳು. ಅವಳು ತನ್ನ ಮೈಯೊಳಗಿನ ಪ್ರೇಮ ವನ್ನೆಲ್ಲ ರಾಜುವಿಗೆ ಅರ್ಪಿಸಿದ್ದಳು. ಅವನನ್ನು ಒಂದು ಸಲ ಕಂಡು ಮಾತಾಡಿ ತನ್ನ ಜನ್ಮ ಸಾರ್ಥಕ ಮಾಡಿಕೊಳ್ಳಬೇಕೆಂದು ಕನಸು ಕಟ್ಟಿದ್ದಳು. ಅವಳ ಗಂಡ ನಾಳೆ ಬಂದುಬಿಡುವ, ನಾಳಿದ್ದು ಮೈಸೂರಿಗೆ ಕರೆದುಕೊಂಡು ಹೋಗಿಬಿಡುವ; ಆಮೇಲೆ ರಾಜುವನ್ನು ನೋಡುವ ಪ್ರಮೇಯ ಸಿಗುವುದಿಲ್ಲ. ಇವತ್ತು ಒಂದೇ ದಿನ ಅವಳಿಗೆ ಅವಕಾಶ. ಇವತ್ತು ಅವನು ಬರದಿದ್ದರೆ ಅವಳು ಪ್ರೇಮಿಸಿದ ಪ್ರೇಮವೆಲ್ಲ ವ್ಯರ್ಥ........

ಆರು ಘಂಟೆ ರೈಲಿಗೆ ರಾಜು ಬಂದ: ಕಿಟಕಿಯನ್ನು ತೆರೆದ. ಹಿತ್ತಲಿನಲ್ಲಿ ಕೂತು ಬೇಜಾರಾಗಿ ಒಳಗೆ ಹೋಗಿದ್ದ ಜೆಸ್ಸಿ ಆಗತಾನೇ ನಲ್ಲಿಯ ಹತ್ತಿರ ಬಂದಳು. ರಾಜುವನ್ನು ನೋಡಿದಳು. ಹರುಷದಿಂದ ಮೈಯೆಲ್ಲ ನಡುಗಿತು.

"ಇಷ್ಟು ದಿನ ಎಲ್ಲಿ ಹೋಗಿದ್ದಿರಿ?" ಎಂದು ಕೇಳಿದಳು ಕೈಸನ್ನೆಯಲ್ಲಿ.

"ಊರಿಗೆ"

"ನಮ್ಮ ಯಜಮಾನರು ಊರಲ್ಲಿಲ್ಲ. ಮನೆಯಲ್ಲಿ ನಾನೊಬ್ಬಳೇ!"

ರಾಜುವಿಗೆ ಅರ್ಥವಾಗಲಿಲ್ಲ. "ಏನು ಹೇಳುತ್ತಿ?" ಎಂದ ಕೈಸನ್ನೆಯಲ್ಲಿ.

"ನಮ್ಮ ಯಜಮಾನರಿದ್ದಾರಲ್ಲ, ಕೊರಲಿಗೆ ತಾಲಿ ಕಟ್ಟಿದವರು"

"ಹ್ಞ"

"ಅವರು ಮೈಸೂರಿಗೆ ಹೋಗಿದ್ದಾರೆ. ಅಕೋ ಅಲ್ಲಿರೋ ಮೈಸೂರಿಗೆ"

"ಏನು ಹೇಳುತ್ತಿಯೋಮ್ಮ, ಗೊತ್ತೇ ಆಗವೊಲ್ಲದು."

"ಬಿಡಿ–ನೀವೊಂದು ಮಂಕು!" ಎಂಬರ್ಥದಲ್ಲಿ ಕೈ ಒದರುತ್ತ ಜೆಸ್ಸಿ ಮನೆಗೆ ಹೋದಳು.

"ನಮಗೆ ಮೈಸೂರಿಗೆ ವರ್ಗವಾಗಿದೆ. ಮನೆಯವರು ಮೈಸೂರಿಗೆ ಹೋಗಿದಾರೆ. ನಾಳೆ ಬಂದು ಕರೆದುಕೊಂಡು ಹೋಗುತ್ತಾರೆ. ಈವತ್ತು ಒಂದೇ ದಿನ ನಮಗೆ ಅವಕಾಶ. ರಾತ್ರಿ ಹನ್ನೊಂದು ಘಂಟೆಗೆ ಮನೆಗೆ

ಬನ್ನಿ, ಮರೆಯಬಾರದು. ಹೀಗೆಂದು ತುಂಡು ಕಾಗದದಲ್ಲಿ ಬರೆದು ರಾಜುವಿಗೆ ತಲಪಿಸಿದಳು.

ವಿಷಯ ಇಷ್ಟು ಪ್ರಬಲವಾಗಿ ಬೆಳೆದು ಬರುತ್ತೆಂದು ರಾಜು ಎಣಿಸಿಯೇ ಇರಲಿಲ್ಲ. ತಮಾಷೆಯಾಗಿ ಕಾಗದ ಪತ್ರಗಳನ್ನು ಬರೆಯುವುದರಲ್ಲಿ ತಮ್ಮ ಸ್ನೇಹವೆಲ್ಲ ಮುಗಿದು ಹೋಗುತ್ತೆಂದು ಅವನು ಭಾವಿಸಿದ್ದ. ಈ ಕಾಗದವನ್ನು ಓದಿದಾಗ ಆತನಿಗೆ ಭಯವಾಯಿತು. ಥರಥರ ನಡುಗಿದ. "ದೇವರೇ! ಹೇಗಾದರೂ ಮಾಡಿ ಈ ಕುತ್ತಿನಿಂದ ಬಿಡಿಸಿಕೊಡಪ್ಪ!" ಎಂದು ಮೊರೆಯಿಡುತ್ತ ಊಟಕ್ಕೆ ಹೋದ. ಊಟ ಮುಗಿಸಿಕೊಂಡು ಸಿನಿಮಾಕ್ಕೆ ಹೊರಟ.

ಜೆಸ್ಸಿ ಮನೆಯನ್ನೆಲ್ಲ ಒಪ್ಪ ಮಾಡಿದಳು. ಗಬಗಬನೆ ಊಟಮಾಡಿ ಹಾಸಿಗೆಯನ್ನು ಸಿದ್ಧಮಾಡಿದಳು. ತಟ್ಟೆಯಲ್ಲಿ ವೀಳಯವನ್ನಿಟ್ಟಳು. ಹಾಲು ಹಣ್ಣನ್ನಿಟ್ಟಳು. ಅಂದವಾಗಿ ಸಿಂಗರಿಸಿಕೊಂಡು ಕಾದಳು. ರಾಜು ಬಾಗಿಲ ಬಳಿ ಬಂದಾಗ ಹೀಗೆ ಇಲ್ಲಿ ನಿಂತು ಅವನನ್ನು ಎದುರುಗೊಳ್ಳಬೇಕು. ಹೀಗೆ ಅವನನ್ನು ಕರೆದುಕೊಂಡು ಮಂಚದಮೇಲೆ ಕೂಡಿಸಬೇಕು ಎಂದು ಮುಂತಾಗಿ ಮನಸ್ಸಿನಲ್ಲಿ ಚಿತ್ರಿಸಿಕೊಂಡಳು.

ಅವಳ ಚಿತ್ರಗಳೆಲ್ಲ ಭಗ್ನವಾದುವು. ರಾಜು ಬರಲಿಲ್ಲ. ಅವಳು ಮಂಚದ ಮೇಲೆ ಕೂತು ನೋಡಿದಳು. ಹಿತ್ತಿಲ ಬಾಗಿಲನ್ನು ತೆರೆದು ಹೊರಗೆ ಬಂದು ನೋಡಿದಳು. ರಾಜು ಮನೆಯ ಹಿತ್ತಿಲ ಬಾಗಿಲನ್ನು ತಟ್ಟಿ ನೋಡಿದಳು. ಕಡೆಗೆ ಅವರ ಮನೆಯ ಮುಂಬಾಲಿಗೂ ಬಂದು ನೋಡಿದಳು. ರಾಜು ಮನೆಯಲ್ಲಿರಲಿಲ್ಲ, ಬೀಗ ಹಾಕಿತ್ತು. ಜೆಸ್ಸಿ ಮನೆಗೆ ಹಿಂತಿರುಗಿ ಹೋಗಿ ಅತ್ತಳು.

o o o

ಮರುದಿನ ಮಧ್ಯಾಹ್ನ ರಾಜುವಿಗೆ ಇನ್ನೊಂದು ಚೀಟಿ ತಲಪಿತು. "ನಮ್ಮ ಯಜಮಾನರು ಇವತ್ತೂ ಬರಲಿಲ್ಲ. ನಾಳೆ ಖಂಡಿತವಾಗಿ ಬಂದು ಬಿಡುವರು. ಆದ್ದರಿಂದ ಇದೊಂದೇ ದಿನ ನಮಗೆ ವಿರಾಮ. ನೀವು ನನ್ನನ್ನು ಪ್ರೀತಿಸುವುದಾದರೆ ಇವತ್ತು ಖಂಡಿತ ಬರಬೇಕು. ಹೋಗಲಿ

ನೀವು ಬರದಿದ್ದರೆ ಬೇಡ. ನಾನೇ ನಿಮ್ಮ ಮನೆಗೆ ಬರುತ್ತೇನೆ. ರಾತ್ರಿ ಹನ್ನೊಂದು ಘಂಟೆ. ಹಿತ್ತಿಲ ಬಾಗಿಲ ಅಗುಳಿ ತೆಗೆದಿಟ್ಟಿರಿ."

ಜೆಸ್ಸಿ ಹನ್ನೊಂದು ಘಂಟೆಗೆ ಸರಿಯಾಗಿ ರಾಜು ಮನೆಯ ಹಿತ್ತಿಲ ಬಾಗಿಲನ್ನು ತಟ್ಟಿದಳು. ಬಾಗಿಲು ಹಾಕಿತ್ತು. ಬೀದಿಯ ಕಡೆಯಿಂದ ಬಂದು ನೋಡಿದಳು. ಬಾಗಿಲ ಬೀಗಹಾಕಿ ರಾಜು ಯಥಾಪ್ರಕಾರ ಸಿನಿಮಾಕ್ಕೆ ಹೋಗಿದ್ದ. ಅವಳು ಮನೆಗೆ ಹೋಗಿ ಮಲಗಿದಳು. ನಿದ್ದೆ ಬರಲಿಲ್ಲ. ಎರಡು ಘಂಟೆಗೆ ಎದ್ದು ಪುನಃ ರಾಜು ಮನೆಗೆ ಬಂದಳು. ಅವನಿನ್ನೂ ಬಂದಿರಲಿಲ್ಲ. ಅಲ್ಲಿಯೇ ಗೋಡೆಯಬಳಿ ಅವಿತುಕೊಂಡು ಕಾದಳು.

ಅವನು ಎರಡೂವರೆ ಘಂಟೆಗೆ ಬಂದ. ಬೀಗ ತೆಗೆದು ಬಾಗಿಲು ತೆರೆದ. ಸ್ವಿಚ್ ಇರುವ ಜಾಗಕ್ಕೆ ಹೋಗಿ ದೀಪವನ್ನು ಹೊತ್ತಿಸುವಷ್ಟರಲ್ಲಿ ಜೆಸ್ಸಿ ಒಳಹೊಕ್ಕು ಬಾಗಿಲು ಮುಚ್ಚಿದಳು.

o o o

ಮರುದಿನ ಜೆಸ್ಸಿಯ ಗಂಡ ವಾಪಸು ಬಂದ. ಮುಂದಿನ ಸೋಮವಾರ ಮೈಸೂರಿಗೆ ಪ್ರಯಾಣ. ನಡುವೆ ಈಸ್ಟರ್ ಬಂದುಬಿಟ್ಟಿತ್ತು. ಈಸ್ಟರ್ ಭಾನುವಾರ ಕಳೆದುಕೊಂಡು ಸೋಮವಾರ ಮೈಸೂರು.

ಅಂದರೆ ಇನ್ನೂ ಏಳು ದಿನಗಳಿದ್ದುವು. ಆರುದಿನ ರಾಜುವಿನೊಡನೆ ನಲಿಯಬಹುದು. ಅವಳ ಗಂಡ ರಾತ್ರೆ ಬಳೇಪೇಟೆಯ ಕಡೆ ಹೋಗಿ ಬಿಡುತ್ತಿದ್ದ. ಅವಳು ರಾಜು ಮನೆಗೆ ಬರುತ್ತಿದ್ದಳು.

o o o

"ನೆನ್ನೆ ಚರ್ಚಿಗೆ ಹೋಗಿದ್ದೆ. ಈವರೆಗೆ ಮಾಡಿದ ಪಾಪಗಳನ್ನೆಲ್ಲ ಒಪ್ಪಿಸಿಬಿಟ್ಟೆ."

"ಏನೇನು ಪಾಪ ಮಾಡಿದೆ ಹೇಳು."

"ಇದೋ ಇದೇ"—"ಯಾವುದು ?"

"ನಿಮ್ಮನ್ನು ಪ್ರೇಮಿಸಿದ್ದು. ಶಾಸ್ತ್ರ ದೃಷ್ಟಿಯಿಂದ ನಾನು ನಿಮ್ಮನ್ನು ಪ್ರೇಮಿಸುವುದು ಪಾಪಕರವಾದದ್ದು ತಾನೇ ? ನನ್ನ ಗಂಡ ನಿಮ್ಮಂತೆ ಗುಣವಂತನಾಗಿದ್ದರೆ ನನ್ನ ಮನಸ್ಸು ಹೀಗೇಕೆ ಹರಿಯುತ್ತಿತ್ತು ? ಅಂಥ

ಗಂಡನೊಡನೆ ನಾನು ಹೆಂಡತಿಯಾಗಿ ಬಾಳಬೇಕಾದುದು ಧರ್ಮಶಾಸ್ತ್ರ. ಅವನನ್ನು ಹಳಿದು ನಿಮ್ಮನ್ನು ಪ್ರೀತಿಸುವುದು ಪಾಪಕೃತ್ಯ. ಪಾದ್ರಿಯ ಮುಂದೆ ಒಂದನ್ನೂ ಮುಚ್ಚಿಡದೆ ಹೇಳಿಬಿಟ್ಟೆ. ಹಿಂದೂ ಪಾದ್ರಿಗಳಾಗಿದ್ದರೆ ಹೀಗೇಕೆ ಮಾಡಿದೆ ಹಾಗೇಕೆ ಮಾಡಿದೆ ಎಂದು ಪೃಚ್ಛಿಸುತ್ತಿದ್ದರು. ಅವರು ಐರೋಪ್ಯರಾದ್ದರಿಂದ ನಾನು ಹೇಳಿದುದನ್ನೆಲ್ಲ ಮೌನವಾಗಿ ಕೇಳಿಕೊಂಡರು, ಮನ್ನಿಸಿಯೂ ಮನ್ನಿಸಿದರು. ನಾಳೆ ಈಸ್ಟರ್ ಭಾನುವಾರ. ಮುಂಜಾನೆ ಚರ್ಚಿಗೆ ಹೋಗಿ ತೀರ್ಥ ತೆಗೆದುಕೊಳ್ಳುತ್ತೇನೆ. ನಾಳಿದ್ದು ಮೈಸೂರು. ನಾಳೆ ರಾತ್ರಿ ಬರೋಕಾಗೊಲ್ಲ. ಇದೇ ಕಡೆಯ ದಿನ.

"ನಾನೂ ಮೈಸೂರಿಗೆ ಬರುತ್ತೇನೆ ಕಣೆ."

"ಆಗೊಲ್ಲ. ನೀವು ಬಂದರೂ ಆವೇಳೆಗೆ ನಿಮ್ಮ ಹೆಂಡತಿ ಮನೆಗೆ ಬಂದಿರುತ್ತಾರೆ. ನಮ್ಮ ಮನೆಯಲ್ಲೂ ನಾನೊಬ್ಬಳೇ ಇರೊಲ್ಲ, ನಮ್ಮ ಅತ್ತೆ, ನಾದಿನಿ ಎಲ್ಲಾ ಇದ್ದಾರೆ,

ಆ ರಾತ್ರಿ ಜೆಸ್ಸಿಯನ್ನು ಬೀಳ್ಕೊಡುತ್ತ ಅವಳ ಕೈಗೆ ಒಂದು ಸೀರೆ, ಜಾಕೆಟ್ಟನ್ನು ತಂದುಕೊಟ್ಟ. "ಈಸ್ಟರ್ ನೆನಪಿಗಾಗಿ" ಎಂದು ನಸುನಗುತ್ತ ಹೇಳಿದ.

ಜೆಸ್ಸಿಯ ಮುಖ ಉಬ್ಬಿತು. "ಅಂದವಾದ ಸೀರೆ! ನನಗೆ ಒಪ್ಪುವ ಹಾಗೆ ತಂದಿದ್ದೀರಲ್ಲ!" ಎನ್ನುತ್ತ ಸೀರೆಯನ್ನೂ ಜಾಕೆಟ್ಟನ್ನೂ ಮುತ್ತಿಟ್ಟಳು. ಅನಂತರ ಮನೆಗೆ ಹೋದಳು.

ಹಿತ್ತಲ ಬಾಗಿಲು ಅಗಲವಾಗಿ ತೆರೆದಿತ್ತು. ಆಗಲೇ ಅವಳೆದೆ ಕುಸಿದು ಬಿತ್ತು. ತಾನು ರಾಜುವಿನೊಡನೆ ಲಲ್ಲೆ ಹೊಡೆಯುತ್ತಿದ್ದಾಗ ತನ್ನ ಗಂಡ ಮನೆಗೆ ಬಂದು ಬಿಟ್ಟನೋ ಏನೋ! ಹಾಗಾದರೆ ಮುಂದೆ ಗತಿ?

ಕುಸಿದು ಬೀಳುತ್ತಿದ್ದ ಎದೆಯನ್ನು ಕೈಯಲ್ಲಿ ಭದ್ರವಾಗಿ ಹಿಡಿದು ಕೊಂಡು ಮೌನವಾಗಿ ಒಳಗೆ ಹೋದಳು. ಅವಳ ಊಹೆ ದೃಢಪಟ್ಟಿತು "ಏನೇ ಅದು ಕೈಯಲ್ಲಿ?" ಕೆಂಡ ಕಾರುತ್ತಿದ್ದ ಕಣ್ಣುಗಳನ್ನಗಲಿಸುತ್ತ. ಅವಳ ಗಂಡ ಒಳಗೆ ನಿಂತು ಕೇಳಿದ.

ಜೆಸ್ಸಿ ನಡುಗಿದಳು. ಉಸಿರೆತ್ತದೆ ನಿಂತಳು. ಗಂಡ ಅವಳನ್ನು ದರದರನೆ ಎಳೆದ. ಕೈಯಲ್ಲಿದ್ದ ಬೆತ್ತದಿಂದ ಛಡಿ ಛಡಿಯಾಗಿ ಬಿಗಿದ. ಅವಳ ಕೈ, ಕಾಲು, ಎದೆ, ಬೆನ್ನು – ಎಲ್ಲಿ ಸಿಕ್ಕರಲ್ಲಿ ಬೀಸಿ ಹೊಡೆದ.

" ಹೇಳು, ಯಾರ ಮನೆಗೆ ಹೋಗಿದ್ದೆ, ಹೇಳು "

" ನನ್ನ ಕೇಳಬೇಡಿ, ನಾ ಹೇಳೊಲ್ಲ "

ಅವನ ಸಿಟ್ಟು ಏರಿತು. ಸಿಡಿದೆದ್ದು ಬಿದ್ದ. ಮತ್ತೆ ಹೊಡೆದ. ಮೈ ಮೇಲೆ ಬಾಸುಂಡೆಗಳೆದ್ದು ಚರ್ಮ ಸುಲಿದು ಬರುವ ತನಕ ಹೊಡೆದ.

" ರಂಡೆ! ನೀನು ಹೇಳದೆ ಹೋದರೆ ಬಿಟ್ಟೇನೇನು? ಈ ಸೀರೆಯಲ್ಲಿ ಅಂಟಿಸಿರೋ ಚೀಟಿಯನ್ನಿಟ್ಟುಕೊಂಡು ತನಿಖೆ ಮಾಡಿದರೆ ಅವನು ಸಿಗದೆ ಹೋಗುತ್ತಾನೇನು? ನಿನ್ನೊಂದಿಗೆ ಅವನೂ ಸಾಯದೆ ಹೋಗುತ್ತಾನೇನು?"

" ನಿಮ್ಮ ದಮ್ಮಯ್ಯ! ನಾನೇ ಎಲ್ಲಾ ಹೇಳಿ ಬಿಡುತ್ತೇನೆ. ಅವರನ್ನು ಮಾತ್ರ ಸಾಯಿಸಬೇಡಿ. ಅವರದು ಇಷ್ಟಾದರೂ ತಪ್ಪಿಲ್ಲ. ನಾನೇ ಅವರನ್ನು ಚಲಿಸಿದೆ. ನನ್ನನ್ನು ಚಿತ್ರ ವಧೆ ಮಾಡಿ, ಕೊಂದು ಕಡಿದ್ಹಾಕಿ. ಅವರನ್ನು ಮಾತ್ರ ಹಿಂಸಿಸಬೇಡಿ."

" ಹಾಗಾದರೆ ಹೇಳು, ಯಾರವನು? "

" ಅವರನ್ನೇನೂ ಮಾಡುವುದಿಲ್ಲವೆಂದು ಮಾತು ಕೊಡಿ "

" ಆ ಮೇಲೆ ನೀವಿಬ್ಬರೂ ಚಕ್ಕಂದವಾಡಿಕೊಂಡಿರಬಹುದೆಂತಲೋ? "

" ಇಲ್ಲ, ಈ ಜನ್ಮದಲ್ಲಿ ನಾನವರನ್ನು ಪುನಃ ನೋಡೋಲ್ಲ. ನನ್ನಿಂದ ಅವರಿಗೆ ಶಿಕ್ಷೆಯಾಗದಿದ್ದರೆ ಸಾಕು "

" ಸರಿ ಹೇಳಿ ತೊಲಗು. ಯಾರದು? "

ಜೆಸ್ಸಿ ಹೇಳಿದಳು. ಮೊದಲಿನಿಂದ ಕೊನೆಯ ತನಕ ನಡೆದುದೆಲ್ಲವನ್ನೂ ಹೇಳಿದಳು. ಅವಳ ಗಂಡ ಹಲ್ಲು ಹಲ್ಲು ಕಡಿದ. ಕೆಳಗೆ ಬಿದ್ದಿದ್ದ ಸೀರೆಯನ್ನೂ ಜಾಕೆಟ್ಟನ್ನೂ ಹಿತ್ತಿಲಿಗೆ ತಳ್ಳಿ ಸೀಮೆ ಎಣ್ಣೆಯನ್ನು ಸುರಿದು ಬೆಂಕಿ ಹಚ್ಚಿದ.

ಸಂಜೆಯ ಹೊತ್ತಿಗೆ ಜೆಸ್ಸಿ ಮೈ ಘಾಯಗಳನ್ನೆಲ್ಲ ಮರೆತು ಆನಂದವಾಗಿದ್ದಳು. ಮೈ ತೊಳೆದು ಸೊಗಸಾದ ಸೀರೆಯನ್ನುಟ್ಟು ಚೆನ್ನಾಗಿ ಸಿಂ

ರಿಸಿಕೊಂಡಳು. ತಲೆ ತುಂಬ ಹೂ ಮುಡಿದುಕೊಂಡಳು. ರೂಮಿನ ಮೇಲ್ಛಾವಣಿಯಲ್ಲಿದ್ದ ಕೊಕ್ಕೆಗೆ ಹಗ್ಗವನ್ನು ಕಟ್ಟಿದಳು.

ರಾತ್ರಿ ಒಂಭತ್ತು ಘಂಟೆ. ಅವಳ ಗಂಡ ಯಥಾ ಪ್ರಕಾರ ಬಳೇಪೇಟೆಗೆ ಹೊರಟು ಹೋಗಿದ್ದ. ರಾಜು ಆಗ ತಾನೇ ಊಟ ಮುಗಿಸಿಕೊಂಡು ಮಹಡಿಯ ಮೇಲೆ ಬಂದ.

"ರಾಜು!" ಎಂದು ಯಾರೋ ಕೂಗಿದಂತೆ ಕೇಳಿಸಿತು. ಜೆಸ್ಸಿಯ ಮನೆಯಿಂದ ಬಂದ ಧ್ವನಿ ಅದು. ಒಡನೆ ಎದ್ದು ಕಿಟಕಿಯಲ್ಲಿ ನೋಡಿದ. ಅವಳ ಮನೆಯ ಬಾಗಿಲುಗಳೆಲ್ಲ ಮುಚ್ಚಿತ್ತು. ಯಾರೂ ಕಣ್ಣಿಗೆ ಕಾಣಿಸಲಿಲ್ಲ. ಬರಿಯ ಭ್ರಮೆಯಿರಬೇಕೆಂದುಕೊಂಡ. ಆ ಕೂಗು ಇನ್ನೊಂದು ಸಲ ಕೇಳಿಸೀತೆಂದು ಅಲ್ಲಿಯೇ ಬಹಳ ಹೊತ್ತು ನಿಂತ.

ಜೆಸ್ಸಿ ಆ ವೇಳೆಗೆ ಈ ಲೋಕವನ್ನೇ ಬಿಟ್ಟಿದ್ದಳು.





# ರೋಹಿಣಿ

ರೋಹಿಣಿಗೆ ಸದಾ ನಲ್ಲಿಯ ಹತ್ತಿರವೇ ಕೆಲಸ. ರಾಮಕೃಷ್ಣನಿಗೆ ಕಿಟಕಿಯ ಹತ್ತಿರ ಕೆಲಸ. ಬೆಳಿಗ್ಗೆ ಆರೂವರೆಗೆಲ್ಲ ಎದ್ದು ರೋಹಿಣಿ ತಮ್ಮ ಹಿತ್ತಲಿನಲ್ಲಿದ್ದ ನಲ್ಲಿಯ ಬಳಿ ಬರುವಳು. ಬಕೆಟ್ಟನ್ನು ನೀರಿಗಿಡುತ್ತ ಎದುರು ಮನೆಯ ಕಿಟಕಿಯನ್ನು ನೋಡುವಳು. ಮನೆಯ ಮುಂದೂ ಹಿತ್ತಲ ಬಾಗಿಲ ಮುಂದೂ ಸೆಗಣಿ ನೀರನ್ನು ಹಾಕಿ ಬಕೆಟ್ಟನ್ನು ಮತ್ತೆ ನಲ್ಲಿಯ ಕೆಳಗಿಟ್ಟು ಮುಸುರೆ ಪಾತ್ರೆಗಳನ್ನು ತೊಳೆಯುವಳು. ಕೈಗಳೆರಡೂ ಪಾತ್ರೆಯ ಮೇಲಿದ್ದರೆ ಕಣ್ಣುಗಳೆರಡೂ ಕಿಟಕಿಯ ಕಡೆ.

ರಾಮಕೃಷ್ಣನಿಗೆ ಹಾಸಿಗೆಯಿಂದೆದ್ದ ಮೇಲೆ ಕಿಟಕಿಯ ಬಾಗಿಲನ್ನು ತೆರೆಯುವುದು ಮೊದಲ ಕೆಲಸ. ಎದುರು ಮನೆಯ ಹಿತ್ತಿಲ ಕಡೆ ಒಂದು ಸಲ ದೃಷ್ಟಿಸಿ ನೋಡುವನು. ಸಡಗರದಿಂದ ನೀರಿನ ಮನೆಗೆ ಹೋಗಿ ಮುಖ ತೊಳೆದುಕೊಂಡು ಒಂದು ಸಲ ಗುಟುಕು ಕಾಫಿ ಕುಡಿದು ಕಿಟಕಿಯ ಮುಂದೆ ಹಾಕಿಕೊಂಡಿದ್ದ ಕುರ್ಚಿಯ ಮೇಲೆ ಅವಸರದಿಂದ ಕೂಡುವನು. ಎಂಟು ಘಂಟೆಯ ತನಕ ಬರೆಯುವುದೋ ಓದುವುದೋ ಗಮನಿಸುವನು. ಕೈ ಪುಸ್ತಕವನ್ನು ಹಿಡಿದುಕೊಂಡಿದ್ದರೆ ಕಣ್ಣು ನಲ್ಲಿಯ ಕಡೆ.

ರಾಮಕೃಷ್ಣನು ಬ್ಯಾಂಕಿನಲ್ಲಿ ಲೆಡ್ಜರನ್ನು ಬರೆಯುತ್ತಿರುವಾಗ ಅನೇಕ ವೇಳೆ ರೋಹಿಣಿಯನ್ನು ಜ್ಞಾಪಿಸಿಕೊಳ್ಳುವನು. ಮುದ್ದಾದ ಹೆಸರು. ಮುದ್ದಾದ ರೂಪು. ಚುರುಕಾದ ಕಂಗಳು. ದುಂಡು ಮುಖ – ಇಲ್ಲ ನಸು ನೀಳವಾದ ಮುಖವೋ? ಹತ್ತಿರ ಹೋಗಿ ನೋಡಿದವರಾರು? ದುಂಡು ಮುಖವೋ ನೀಳ ಮುಖವೋ, ಅಂತು ಸುಂದರಸಾದ ಮುಖ — ಛೆ, ನೆನೆಸಿ ನೆನೆಸಿ ಏನು ಪ್ರಯೋಜನ? ಅವಳು ಐಯ್ಯಂಗಾರ್ ಹುಡುಗಿ, ತಾನು ವೀರ ವೈಷ್ಣವ ....

ಆದರೇನು?

ಅದು ಸರಿ. ತಾಯಿ ತಂದೆ ಒಪ್ಪಬೇಕಲ್ಲ? ಮಠದ ಅಂಗೀಕಾರವಾಗಬೇಕಲ್ಲ?

ತಾಯಿ ತಂದೆ, ಮನೆ ಮಠ – ಪ್ರೇಮದ ಮುಂದೆ ಇವೆಲ್ಲ ಎಂಥ ವಸ್ತುಗಳು? ರೋಹಿಣಿಗೆ ತಾಯಿ ತಂದೆಗಳಿಲ್ಲವೆ? ಕುಲ ಗೋತ್ರಗಳಿಲ್ಲವೆ? ಇವನ್ನೆಲ್ಲ ಬದಿಗೊತ್ತಿ ತನ್ನನ್ನಿಷ್ಟು ಕಾತುರಳಾಗಿ ಪ್ರೇಮಿಸುವಾಗ ತಾನು ಯಾವ ಬಂಧನಕ್ಕಾಗಿ ಅವಳನ್ನು ನಿರಾಕರಿಸಬೇಕು? ಜಾತಿಯಿಂದೇನು ಸಕಾರ? ಮತದಿಂದೇನುದ್ಧಾರ?

ಏನು ಬಂದರೂ ಬರಲಿ. ನಾಳೆ ರೋಹಿಣಿಗೆ ಕಾಗದವನ್ನು ಬರೆದು ಅವಳು ನೋಡುತ್ತಿರುವ ಹಾಗೆಯೇ ಕಿಟಕಿಯಿಂದ ಕೆಳಗೆ ಹಾಕುತ್ತೇನೆ. ಅವಳಿಗೆ ನನ್ನನ್ನು ಮದುವೆಯಾಗಲು ಇಷ್ಟವಿಲ್ಲದಿದ್ದರೆ ಅದಕ್ಕೆ ಉತ್ತರ ಬರೆಯೋಲ್ಲ. ಮದುವೆಯಾಗಲು ಸಮ್ಮತವೆಂದು ಕಳುಹಿಸಿದರೋ........ ಆಮೇಲೆ ನೋಡೋಣ.

೦ ೦ ೦

"ವಯಸ್ಸು ಬಂದಾಕ್ಷಣ ಹೀಗಾದರೂ ಆಡುವುದೇನು? ಮನುಷ್ಯಾಂತ ಹುಟ್ಟಿದ ಮೇಲೆ ನಾಲ್ಕು ಜನರಲ್ಲಿ ಮರ್ಯಾದೆ ಬೇಡವೆ? ಮನಸ್ಸು ಹಾಯ್ದು ಕಡೆ ಮದುವೆ ಮಾಡಿಕೊಂಡರೆ ಕುಲವೇನಾಗಬೇಕು? ಇವನಿಂದ ಮನೆಯವರೆಲ್ಲ ಬಹಿಷ್ಕಾರ ಹಾಕಿಸಿಕೊಂಡು ಕಾಡಿಗೆ ಹೋಗಬೇಕಾದ್ದೆ." ಹೀಗೆ ಮುಂತಾಗಿ ಗೋಮತಿಬಾಯಿ ರಾಜಾರಾಯರೊಡನೆ ಸಿಡುಕುಸಿಡುಕಾಗಿ ಹೇಳುತ್ತಿದ್ದರು. ಇದಕ್ಕೆ ರಾಮಕೃಷ್ಣನಮರೆವು ಬುದ್ಧಿಯೇ ಕಾರಣ. ಅವನ ಕಾಗದಕ್ಕೆ ರೋಹಿಣಿ ಸೂಕ್ಷ್ಮವಾಗಿ ಬದಲು ಬರೆದಿದ್ದಳು. "ಬಾಡಿ ಹೋಗುತ್ತಿರುವ ಗಿಡಕ್ಕೆ ನೀವು ತಾನೇ ನೀರೆರೆಯಬೇಕು?"

ರಾಮಕೃಷ್ಣ ಅದನ್ನು ಸಂಭ್ರಮದಿಂದ ಓದಿದ. ಮತ್ತೆ ಮತ್ತೆ ಓದಿದ. ಸ್ನಾನಕ್ಕೆ ನೀರು ಕಾದುಹೋಗುತ್ತಿದೆಯೆಂದು ಅಡಿಗೆ ಮನೆಯಿಂದ ಗೋಮತಿಬಾಯಿಯು ಕರೆದರು. ರಾಮಕೃಷ್ಣ ಕಾಗದವನ್ನು ಮೇಜಿನ ಮೇಲಿಟ್ಟು ಸ್ನಾನದ ಮನೆಗೆ ಹೋದ.

ರಾಜಾರಾಯರು ಮಡಿಯನ್ನುಟ್ಟುಕೊಂಡು ದೇವರ ಮುಂದೆ ಭಾಗವತವನ್ನು ಪಾರಾಯಣ ಮಾಡುವುದಕ್ಕಾಗಿ ಕನ್ನಡಕವನ್ನು ಹುಕುಡುತ್ತ ರೂಮಿಗೆ ಬಂದರು. ಮೇಜಿನ ಮೇಲಿದ್ದ ಕಾಗದವು ಅಕಸ್ಮಾತ್ತಾಗಿ ಕಣ್ಣಿಗೆ ಬಿತ್ತು. ಬೀರುವಿನಲ್ಲಿದ್ದ ಕನ್ನಡಕವನ್ನು ತೆಗೆದು ಕಣ್ಣಿಗೆ ಹೊಂದಿಸಿ

ಕೊಳ್ಳುತ್ತ ಕಾಗದವನ್ನು ಕೈಗೆತ್ತಿ ಓದಿದರು. ಹೀಗೆ ತಿರುವಿ ಹಾಗೆ ತಿರುವಿ ಇನ್ನೊಮ್ಮೆ ಓದಿದರು. ಹೆಂಡತಿಯನ್ನು ಕರೆದು ಆಕೆಯ ಮುಂದೆ ಇನ್ನೊಮ್ಮೆ ಓದಿದರು.

ಗೋಮತಿಬಾಯಿಗೆ ಕೋಪವೇರಿ ಮುಖ ಗಂಟಿಕ್ಕಿತು. ಅಷ್ಟರಲ್ಲಿ ರಾಯರ ಸಮಾಧಾನ.

" ರಾಕ್ಷಸಿಯಂತೆ ಉರಿದು ಬೀಳುತ್ತೀಯಲ್ಲ. ಅಂಥ ಪ್ರಮಾದವೇನು ನಡೆದುಹೊಯ್ತು ?"

" ಒಬ್ಬರಿಗೊಬ್ಬರು ಕಾಗದ ಬರೆಯುವಷ್ಟು ಹತ್ತಿರ ಬಂದರಲ್ಲ, ಸಾಲದೇನು ? ಗೋಡೆ ದಾಟಿಹೋಗುವುದೊಂದು ತಾನೇ ಬಾಕಿ ? ಮುಖ್ಯ ನನ್ನ ಅದೃಷ್ಟ ನೆಟ್ಟಗಿಲ್ಲ. ಕಾಲಕಾಲಕ್ಕೆ ಗಂಟು ಹಾಕಿ ಸೊಸೆಯನ್ನು ಮನೆಗೆ ತಂದು ಕುಕ್ಕರಿಸದಿದ್ದರೆ ಹೀಗೆ. ಕಿಟಕಿಯಲ್ಲಿ ಕೂತು ಕಣ್ಣು ಹೊಡೆಯುವುದೂ, ' ನನಗೆ ಹಸಿವಿಲ್ಲ ', 'ನನಗೇಕೋ ಮನಸ್ಸು ನೆಮ್ಮದಿಯಿಲ್ಲ'; ಎಂದು ಉದಾಸೀನ ಮಾಡುವುದೂ ತಪ್ಪುತ್ತಿತ್ತು. ನಿಮಗಾದರೆ ದೊಡ್ಡದಾಗಿ ಗಂಟು ತರುವ ಸೊಸೆ ಬರಬೇಕು. ಗಂಟು ತರುವ ಸೊಸೆ ಅವನಿಗೆ ಹಿಡಿಸೋಲ್ಲ. ಅವನು ಒಪ್ಪಿದ ಹುಡುಗಿಗೆ ಗಂಟು ತರುವ ಯೋಗ್ಯತೆಯಿಲ್ಲ. ಅಂತೂ ಇಂತೂ ಹುಡುಗಂಗೆ ಮದುವೆಯಿಲ್ಲದಲೇ ವಯಸ್ಸಾಗಿ ಹೋಯಿತು.

" ಅಳುತ್ತೀಯೇಕೆ ? ಈ ಹುಡುಗಿಯನ್ನು ರಾಮಕೃಷ್ಣ ಒಪ್ಪಿದಾನಲ್ಲ. ವರದಕ್ಷಿಣೆ ಎಷ್ಟು ಕೊಡುತ್ತಾರೋ ಕೇಳು. ನಾಳೆಯೇ ನಿಷ್ಕರ್ಷೆ ಮಾಡಿ ಬಿಡೋಣ. ಸಂಪತ್ತು ಶುಕ್ರವಾರ "

" ರಾಮ ರಾಮ ! ನಿಮಗಾದರೂ ಬುದ್ಧಿ ಹೀಗೆ ಚಂಚಲವಾಗಬೇಕೇ ? ಅವಳು ಮೂರುನಾಮದವಳೊಂದ್ರೆ ! "

" ಹೊಲೆಯುವರನ್ನೆಲ್ಲ ಮನೆಯವರನ್ನಾಗಿ ಮಾಡಿಕೊಳ್ಳೋ ಕಾಲ ಕಣೆ ಇದು, ಕಲಿಗಾಲ. ನೀನೂ ನಾನೂ ಜಾತಿ, ಕುಲ ಅಂತ ತಲೆಗೆ ತಲೆ ಹೊಡೆದುಕೊಳ್ಳುತ್ತಿದ್ದರೆ ನಿನ್ನ ಮಗನೂ ಕುಲದ ಹೆಣ್ಣನ್ನೇ ಗಂಟು ಹಾಕಿಕೊಳ್ಳುತ್ತಾನೆ ಅಂತ ಏನು ಭರವಸೆ ? ಮಕ್ಕಳು ತಿಳಿದವರಾದ ಮೇಲೆ ಅವರಿಗೆ ಈ ವಿಷಯದಲ್ಲಿ ಸ್ವಾತಂತ್ರ್ಯ ಕೊಡುವುದೇ ನಮಗೆ ಒಳ್ಳೆಯದು

ನೋಡು. ಒಂದು ವೇಳೆ ನೀನು ಒಲ್ಲೆ ಅಂದೆ. ಅವನೂ ಅವಳೂ ಎಲ್ಲಿ ಗಾದರೂ ಓಡಿ ಹೋಗಿ ಕೂಡಿಕೊಂಡರು ಅಂತಿಟ್ಟುಕೋ. ಯಾರಿಗೆ ಕೊರತೆ ಹೇಳು ? ನಾನೂ ನೀನೂ ಕೊರಗಿ ಕೊರಗಿ ನರಳಬೇಕಷ್ಟೆ "

" ಹಾಗೇನಾದರೂ ಕಟ್ಟಿಕೊಳ್ಳಲಿ. ಅವಳನ್ನು ಮನೆಗಾದರೂ ಸೇರಿಸುತ್ತೇನೆಂದು ಮಾಡಿದಿರೇನು ? ನನ್ನ ಉಸಿರಿರೋ ತನಕ ಅವಳನ್ನು ಹೊಸಲು ದಾಟಿಸುವುದಿಲ್ಲ. ನಾನು ಸತ್ತ ಮೇಲೆ ಮನೆ ಯಾವ ಕೇಡಾ ದರೂ ಆಗಲಿ "

ರಾಮಕೃಷ್ಣ ಇದನ್ನೆಲ್ಲ ಆಲಿಸಿ ಕೇಳುತ್ತ ಸದ್ದಿಲ್ಲದೆ ನೀರನ್ನು ಮೈ ಮೇಲೆ ಸುರಿದುಕೊಂಡ. ಊಟಕ್ಕೆ ಕೂತಾಗ ಎಲ್ಲರೂ ಮೌನ.

ಅದೇ ರಾತ್ರಿ ಊಟ ಮಾಡುತ್ತಿದ್ದಾಗ ರಾಮಕೃಷ್ಣ ದಡಕ್ಕನೆ ಹೇಳಿದ. " ಅಮ್ಮಾ, ನನ್ನನ್ನು ರಂಗೂನಿಗೆ ವರ್ಗಮಾಡಿದ್ದಾರೆ. ಮುಂ ದಿನ ಬುಧವಾರ ಹೊರಡಬೇಕು "

ಗೋಮತಿಬಾಯಿ ಮಾತಾಡಲಿಲ್ಲ. ಆಕೆಗೆ ಏನುತ್ತರ ಕೊಡಬೇ ಕೆಂದು ತೋರದೆ ಹೋಯಿತು. ಮಗನು ರೋಹಿಣಿಯೊಂದಿಗೆ ಸ್ನೇಹ ಬೆಳೆಸಿದ್ದಕ್ಕೆ ಹೇಗೆ ಹೇಗೆ ಬಯ್ಯಬೇಕೆಂದು ಮನಸ್ಸಿನಲ್ಲಿ ಮಧ್ಯಾಹ್ನದಿಂದ ಗುಣಿಸಿಕೊಳ್ಳುತ್ತಿದ್ದಳು. ಹೇಗೆ ಆರಂಭಿಸಬೇಕೆಂದು ಹವಣಿಸುತ್ತಿರುವಾಗ ರಾಮಕೃಷ್ಣ ಈ ಸಂಗತಿ ಹೇಳಿಬಿಟ್ಟ. ಆಕೆ ಮನಸ್ಸಿನಲ್ಲಿ ಕಟ್ಟಿದ್ದ ಬಯ್ಗಳ ಗೋಪುರವೆಲ್ಲ ದಡಕ್ಕನೆ ಕುಸಿದುಬಿತ್ತು.

ರಾಜಾರಾಯರು ಕೇಳಿದರು. " ರಂಗೂನಿಗೇ ? ನೀರಿಗಾಚೆ ಹೋಗ ಬೇಕಲ್ಲೋ ? ಅಷ್ಟು ದೂರ ಏಕೆ ಹಾಕಿದರು ?"

" ರಂಗೂನ್ ಶಾಖೆಗೆ ನುರಿತ ಅಕೌಂಟೆಂಟರನ್ನು ಕಳುಹಿಸಬೇಕೆಂದು ಕೇಳಿಕೆ ಬಂದಿತ್ತು. ಸೆಕ್ರೆಟರಿ ಮಧ್ಯಾಹ್ನ ಮ್ಯಾನೇಜರನ್ನು ಕರೆದ್ರು ಯಾರನ್ನು ಕಳುಹಿಸೋಣ ಅಂತ ಆಲೋಚನೆ ಕೇಳಿದರಂತೆ. ಚೀಟಿ ನನ್ನ ಪಾಲಿಗೆ ಬಿತ್ತು. ನೂರು ರೂಪಾಯಿ ಸಂಬಳ, ಇನ್ನೂರ ಐವತ್ತು ಗ್ರೇಡು .... .... "

ಗೋಮತಿಬಾಯಿಗೆ ದೊಡ್ಡ ಸಮಾಧಾನ. ಸಧ್ಯ ಆ ಐಯ್ಯಂಗಾರ್ ಹುಡುಗಿಯ ಸಹವಾಸ ತಪ್ಪಿಹೋಗುತ್ತಲ್ಲ. ಈಗ ಊರು ಬಿಟ್ಟುಹೋದರೆ

ಒಂದೆರಡು ತಿಂಗಳಲ್ಲಿ ಅವನು ಅವಳನ್ನು ಮರೆತುಬಿಡುತ್ತಾನೆ. ಅನಂತರ ಯ್ಯಾರಾದರೂ ಒಳ್ಳೆಯ ಹೆಣ್ಣನ್ನು ನೋಡಿ ಕಾಗದ ಬರೆದರೆ ರಜಾ ತೆಗೆದು ಕೊಂಡು ಬಂದು ಮದುವೆ ಮಾಡಿಕೊಂಡು ಹೋಗುತ್ತಾನೆ.

"ಆ ಶನಿಯ ಸಹವಾಸ ತಪ್ಪಿತಲ್ಲ!"

"ಯಾವ ಶನಿಯಮ್ಮಾ ?"

"ಬೆಳಗ್ಗೆ ಕಾಗದ ಬರೆದಿತ್ತಲ್ಲ, ಮೂರು ನಾಮದ ಹುಡುಗಿ. ಇದ್ದೂ ಇದ್ದೂ ಒಳ್ಳೆಯ ಸಹವಾಸ ಬೆಳಿಸಿದೆಯಪ್ಪ ......."

"ನೂರು ರೂಪಾಯಿ ಅಂತ ಹೇಳಿದಿಯೇನು? ಗ್ರೇಡು ಎಷ್ಟರವರೆಗೆ?" ರಾಜಾರಾಯರ ಪ್ರಶ್ನೆ.

"ಹೌದಣ್ಣ. ನೂರು–ಹತ್ತು–ಇನ್ನೂರ ಐವತ್ತು."

"ಬಾಧಕವಿಲ್ಲ. ಪ್ರಯಾಣ ಖರ್ಚಿಗೆ ಅಡ್ವಾನ್ಸ್ ಕೊಡುತ್ತಾರೋ ಹೇಗೆ ?"

"ಐನೂರು ರೂಪಾಯಿ ಅಡ್ವಾನ್ಸ್ ಮಂಜೂರಾಗಿದೆ."

ರಾಮಕೃಷ್ಣ ಊಟ ಮಾಡಿ ಎದ್ದ. ಕೈ ತೊಳೆದುಕೊಂಡು ನೇರವಾಗಿ ತನ್ನ ರೂಮಿಗೆ ಹೋದ. ಹಾಸಿಗೆ ಉರುಳಿಸಿ ಬಾಗಿಲನ್ನು ಮುಂದಕ್ಕೆ ತಳ್ಳಿ ಹಾಸಿಗೆಯ ಮೇಲೆ ಕೂತು ರೋಹಿಣಿಗೊಂದು ಚೀಟಿಯನ್ನು ಬರೆದಿಟ್ಟ.

"ರಂಗೂನಿನಲ್ಲಿರುವ ನಮ್ಮ ಬ್ಯಾಂಕಿನ ಶಾಖೆಗೆ ವರ್ಗ ಮಾಡಿಸಿ ಕೊಂಡಿದೇನೆ. ಮುಂದಿನ ಬುಧವಾರ ರಾತ್ರೆ ಮೆಯಿಲಿಗೆ ಪ್ರಯಾಣ. ಶುಕ್ರವಾರ ಮದರಾಸಿನಿಂದ ಹಡಗಿನಲ್ಲಿ ಹೊರಡಬೇಕು. ನಮ್ಮಿಬ್ಬರಿಗೆ ಸೆಕೆಂಡ್ ಕ್ಲಾಸ್ ಡೆಕ್ಕಿನಲ್ಲಿ ಜಾಗವನ್ನು ಮಾಡಿಡಬೇಕೆಂದು ಹಡಗಿನ ಏಜಂಟನಿಗೆ ತಂತಿ ಕೊಟ್ಟಿದ್ದೇನೆ. ಇಬ್ಬರಿಗೂ ಪಾಸ್‌ಪೋರ್ಟು ಪಡೆಯ ಬೇಕು. ಅದಕ್ಕೆ ನಿನ್ನ ಫೋಟೋ ಬೇಕಾಗಿದೆ. ನಿನ್ನಬಳಿ ಇದ್ದರೆ ಒಡನೆ ಕಳುಹಿಸಿಕೊಡು. ಇಲ್ಲವಾದರೆ ನಾಳೆ ಸಂಜೆ ಆರು ಘಂಟೆಗೆ ಮೆಜಸ್ಟಿಕ್ ಸಿನಿಮಾದೆದುರಿಗಿರುವ ಸ್ಟುಡಿಯೋಕ್ಕೆ ಬಂದರೆ ಇಬ್ಬರೂ ಫೋಟೋ ತೆಗೆಯಿ ಸೋಣ. ಬುಧವಾರ ರಾತ್ರಿ ಮೆಯಿಲು ಗಾಡಿಗೆ ತಯಾರಾಗಿ ಹೊರಟು ಬರಬೇಕು. ಸಿಟಿ ಸ್ಟೇಷನ್ನಿಗೆ ಬೇಡ. ಅಲ್ಲಿ ನಮ್ಮ ತಂದೆ ತಾಯಿ

ನನ್ನನ್ನು ಕಳುಹಿಸಿಕೊಡಲು ಬಂದಿರುತ್ತಾರೆ. ಕಂಟೋನ್ಮೆಂಟ್ ಸ್ಟೇಷ್ಷನ್ನಿಗೆ ಬಂದಿರು. ಟಿಕೆಟ್ಟು ನಾನೇ ತೆಗೆದಿಟ್ಟಿರುತ್ತೇನೆ.

"ನಾಳೆಯಿಂದ ನಾನು ಕಿಟಿಕಿಯ ಬಳಿ ಕೂಡುವುದಿಲ್ಲ. ನಮ್ಮ ತಾಯಿಗೆ ನನ್ನ ಮೇಲಿರುವ ಸಂಶಯವೆಲ್ಲ ನಿವೃತ್ತಿಯಾಗಬೇಕು. ನೀನೂ ಬಾರಿಬಾರಿಗೆ ನಲ್ಲಿಯ ಬಳಿ ಬಂದು ಸುಳಿದಾಡಬೇಡ"

"ನಿಮ್ಮ ತಂದೆ ತಾಯಿಗಳಿಗೆ ನೀನು ನನ್ನೊಡನೆ ಹೊರಟು ಬರುವುದು ಸಮ್ಮತವಾಗಿದೆಯೆಂದು ನನ್ನ ಭರವಸೆ. ಅಥವಾ ನಮ್ಮ ತಾಯಿಯಂತೆ ಜಾತಿಕಟ್ಟುಗಳನ್ನು ನೋಡುತ್ತ ಕೂತಿದ್ದಾರೋ ?"

"ನಾಳೆ ಬೆಳಿಗ್ಗೆ ನಮ್ಮ ಬ್ಯಾಂಕಿನ ಹುಡುಗನನ್ನು ನಿಮ್ಮ ಮನೆಗೆ ಕಳುಹಿಸುತ್ತೇನೆ. ಈ ಕಾಗದಕ್ಕೆ ಜವಾಬನ್ನೂ ನಿನ್ನ ಫೋಟೋವನ್ನೂ ಕಳುಹಿಸು."

"ನೀನು ಪ್ರಯಾಣದ ಖರ್ಚಿಗೆ ಹಣವನ್ನೇನೂ ತೆಗೆದುಕೊಂಡು ಬರಬೇಕಾದ್ದಿಲ್ಲ. ಎಲ್ಲ ಖರ್ಚನ್ನೂ ಬ್ಯಾಂಕಿನವರೇ ಕೊಡುತ್ತಾರೆ."

o o o o

ರೋಹಿಣಿ ಊರು ಬಿಟ್ಟು ಹೋದ ಒಂದೆರಡು ತಿಂಗಳವರೆಗೆ ಅವಳೆಲ್ಲಿಗೆ ಹೋದಳೆಂಬ ಸಂಗತಿಯನ್ನು ಅವಳ ತಾಯಿ ಒಬ್ಬರಿಗೂ ಹೇಳಲಿಲ್ಲ. ಕೇಳಬಂದವರಿಗೆಲ್ಲ ಅತ್ತೆಯ ಮನೆಗೆ ಹೋಗಿದ್ದಾಳೆಂದು ಹೇಳಿಬಿಡುವಳು. ಯಾವ ಅತ್ತೆ ಎಂದು ಒಬ್ಬಿಬ್ಬರು ಪೃಚ್ಛಿಸಿ ಕೇಳುವರು. "ಸೋದರತ್ತೆ ಕಣ್ರಿ, ಮೈಸೂರಲ್ಲಿದ್ದಾರೆ. ಬಾ ಬಾ ಅಂತ ಕಾಗದದ ಮೇಲೆ ಕಾಗದ ಹಾಕಿದರು. "ನನಗೂ ಈ ಊರಲ್ಲಿ ಒಂಟಿಯಾಗಿದ್ದು ಬೇಜಾರಾಗುತ್ತಮ್ಮ. ಎರಡು ದಿನ ಹೋಗಿಬರುತ್ತೇನೆ" ಅಂದಳು. "ಹಾಗೇ ಮಾಡು, ಹೋಗಿ ಬಾ" ಅಂದೆ. ಹೋಗಿದ್ದಾಳೆ."

"ಬೇಜಾರಾಗಲ್ಲವೆ ಪಾಪ! ತನ್ನ ನಚ್ಚಿನ ಹುಡುಗ ಊರು ಬಿಟ್ಟು ಹೋದ ಮೇಲೆ ಬೇಜಾರಾಗದೆ ಏನು ಮಾಡೀತು ?" ಎಂದು ವ್ಯಂಗ್ಯವಾಗಿ ಹೇಳಿದರು ಗೋಮತಿಬಾಯಿ. ನೆರೆಯವರ ಸಂಗಡ ; "ಹೆತ್ತ ಕರಳು ಚುಚ್ಚಿದರೂ ಚುಚ್ಚಲಿ. ಈ ರಂಡೆಯ ಸಹವಾಸ ತಪ್ಪಿಸಬೇಕೆಂತಲೇ ನಮ್ಮ ಹುಡುಗನನ್ನು ರಂಗೂನಿಗೆ ಕಳುಹಿಸಲು ಒಪ್ಪಿಕೊಂಡೆ."

ರಾಮಕೃಷ್ಣನಿಂದ ಮೊದಲ ಕಾಗದ ಬಂದಾಗ ಈ ಹೆತ್ತ ಕರುಳು ಚುಚ್ಚಿದ್ದು ಮಾತ್ರವಲ್ಲ, ಚೆನ್ನಾಗಿ ಕಚ್ಚಿತು.

ಕಾಗದದ ಕವರು ಬಂದೊಡನೆ ರಾಜಾರಾಯರು ಉಲ್ಲಾಸದಿಂದ "ಏನೇ, ಏನ್ಮಾಡ್ತೀಯಾ?" ಎನ್ನುತ್ತ ಅಡಿಗೆ ಮನೆಗೆ ಹೋದರು. ಗೋಮತಿಬಾಯಿ ಸೌಟನ್ನು ಕೈಯಲ್ಲಿ ಹಿಡಿದುಕೊಂಡೇ ಗಂಡನ ಬಳಿ ಸಾರಿ ಬಂದರು.

"ರಾಮಕೃಷ್ಣ ಕಾಗದ ಬರೆದಿದಾನೆ ಕಣೆ!"

"ಸಧ್ಯ ನಮ್ಮಪ್ಪ ನೀರ ಮೇಲೆ ಹಾಯ್ದು ಹೋಗಿ ಸುಖವಾಗಿ ಸೇರಿದನಲ್ಲ. ಪ್ರಾಣದೇವರಿಗೆ ನಾಲ್ಕು ತೆಂಗಿನಕಾಯಿ ಒಡೆದು ಹತ್ತು ಜನಕ್ಕೆ ಎಲೆ ಹಾಕುತ್ತೇನೆಂದು ಹರಕೆ ಹೊತ್ತಿದ್ದೆ. ಏನು ಬರೆದಿದಾನೆ ಓದಿ ಅಂದ್ರೆ. ಕಟ್ಟಿಕೊಟ್ಟ ಅವಲಕ್ಕಿ ಅರಳುಹಿಟ್ಟು ತಿಂದನಂತೆ ನು!"

ರಾಯರು ಈ ವೇಳೆಗೆ ಕವರೊಡೆದು ಕಾಗದವನ್ನು ತೆಗೆದು ಓದ ತೊಡಗಿದರು. ರಾಮಕೃಷ್ಣ ಸುಖವಾಗಿ ರಂಗೂನ್ ಸೇರಿದ್ದ. ಬ್ಯಾಂಕಿನ ಆಳುಗಳು ಬಂದರಿಗೆ ಬಂದುದರಿಂದ ಸಾಮಾನುಗಳನ್ನೆಲ್ಲ ಇಳಿಸಿ ಮನೆಗೆ ತೆಗೆಸಿಕೊಂಡು ಹೋಗಲು ಸೌಕರ್ಯವಾಯಿತು. ಬ್ಯಾಂಕಿನವರೇ ಹತ್ತಿರದ ಲ್ಲೊಂದು ಚಿಕ್ಕ ಮನೆಯನ್ನು ನೋಡಿಟ್ಟಿದ್ದರು. ಮನೆ ಬಹಳ ಅನು ಕೂಲವಾಗಿತ್ತು. ಎರಡನೆಯ ಅಂತಸ್ತಿನಲ್ಲಿ ಮನೆ. ಅಡಿಗೆಯ ಮನೆ, ನೀರಿನ ಮನೆ, ಕಕ್ಕಸು, ನಲ್ಲಿ ಎಲ್ಲ ಅಲ್ಲೇ. ಬಾಡಿಗೆ ಇಪ್ಪತ್ತು ರೂಪಾಯಿ, ಬಹಳ ಅಗ್ಗ........ತನ್ನ ನಮ್ರತೆಯ ನಮಸ್ಕಾರಗಳನ್ನು ತಾಯಿಯವರಿಗೆ ಹೇಳುವುದು.

ಕಾಗದದ ಕೊನೆಯಂಚಿನಲ್ಲಿ ಸಣ್ಣ ಅಕ್ಷರಗಳಲ್ಲಿ ಇಷ್ಟು ಬರೆದಿತ್ತು. "ಇನ್ನೊಂದು ವಿಷಯ ಹೇಳುವುದು ಮರೆತುಬಿಟ್ಟೆ. ನಮ್ಮ ಹಿಂದಿನ ಮನೆಯ ಹುಡುಗಿ ರೋಹಿಣಿ ನನ್ನ ಜತೆಯಲ್ಲಿ ಬಂದಿದಾಳೆ. ಕಂಟೋ ನ್ಮೆಂಟು ಸ್ಟೇಷನ್ನಿನಲ್ಲಿ ನನ್ನ ಬೆನ್ನುಹತ್ತಿದಳು. ನೀವೇ ಗತಿ ಎಂದು ಸೆರೆಗೊಡ್ಡಿ ಬೇಡಿಕೊಂಡಳು. ಅವಳು ತನ್ನ ತಾಯ್ತಂದೆಗಳಿಗೆ ಹೇಳದೆ ಬಂದಿರುವಳೆಂತ ಕಾಣುತ್ತೆ."

— ೨ —

ಆರು ವರ್ಷಗಳು ಕಳೆದವು. ಪ್ರಳಯ ಸ್ವರೂಪವಾದ ಕಾಲರಾ ರೋಗವು ರಂಗೂನನ್ನು ಮುತ್ತಿತು. ಜನಗಳು ಬೀದಿ ಬೀದಿಗಳಲ್ಲಿ ಬಿದ್ದು ಸಾಯತೊಡಗಿದರು. ಆ ಹಳ್ಳಿ ನಾಶವಾಯಿತು, ಈ ಊರು ಧ್ವಂಸ ವಾಯಿತು, ಬೆಳೆಗಳೆಲ್ಲ ಬೆಂಕಿ ಉರಿಯಿಂದ ಸುಟ್ಟುಹೋದವು. ಹೀಗೆ ಮುಂತಾಗಿ ಸುದ್ದಿ ಹಬ್ಬಿತು. ಬ್ಯಾಂಕಿನಲ್ಲಿ ನನ್ನ ಹಣ ಕೊಡಿ, ನನ್ನ ನಗ ಕೊಡಿ ಎನ್ನುತ್ತ ಜನಗಳು ದೊಂಬಿ ಹಾಕಿದರು, ಅವರಿಗೆಲ್ಲ ಸಮಾಧಾನ ಹೇಳುವ ವೇಳೆಗೆ ರಾಮಕೃಷ್ಣನಿಗೂ ಅವನ ಸಂಗಡಿಗರಿಗೂ ಸಾಕುಸಾಕಾಗಿ ಹೋಯಿತು.

ಮರುದಿನ ಬ್ಯಾಂಕು ತಟ್ಟನೆ ಮುಚ್ಚಿಹೋಯಿತು. ಈ ವಿಷಯವಾಗಿ ಜನ ಬೇಕು ಬೇಕಾದಂತೆ ಆಡಿಕೊಂಡರು.

ಸುತ್ತುಮುತ್ತ ಅನೇಕ ಊರುಗಳು ಈ ಮಾರಿ ರೋಗದಿಂದ ನಾಶ ವಾಗಿದ್ದುವು. ಬೀದಿಗಳನ್ನು ನೋಡಲು ಭೀಕರವಾಗಿತ್ತು. ಊರವರೆಲ್ಲ ದಿಕ್ಕಾಪಾಲಾಗಿ ಓಡುತ್ತಿದ್ದರು. ಹೆಂಡತಿಯೊಂದು ಕಡೆ–ಗಂಡನೊಂದು ಕಡೆ, ಮಕ್ಕಳೊಂದು ಕಡೆ–ಮನೆಯೊಂದು ಕಡೆ, ಹೀಗೆ ಅಲ್ಲೋಲ–ಕಲ್ಲೋಲವಾಗಿ ಓಡುತ್ತಿದ್ದರು. ಮನೆಯಲ್ಲಿದ್ದ ಪಾತ್ರೆ ಪದಾರ್ಥಗಳು–ನಗನಾಣ್ಯಗಳು, ಎಲ್ಲ ಸಿಕ್ಕಿದವರ ಪಾಲು. ಇದು ನನ್ನ ಸೊತ್ತು, ಇದು ನನ್ನ ಮಗು, ಈಕೆ ನನ್ನವಳು ಎಂಬ ಹಂಬಲಿಲ್ಲ. ಅವರವರ ಜೀವ ಅವರವರು ಉಳಿಸಿಕೊಂಡರೆ ಯಥೇಷ್ಟ.

ರಾಮಕೃಷ್ಣ ಮನೆಗೆ ಓಡಿ ಬಂದ. ರೋಹಿಣಿ ಕಿಟಕಿಯ ಬಳಿ ನಿಂತು ಜನಗಳ ಗಲಿಬಿಲಿಯನ್ನು ನೋಡುತ್ತಿದ್ದಳು. “ನೋಡಿದಿರಾ ದೊಂಬಿ ?”

“ನೋಡುವುದೇನು ? ನಡಿ ಹೋಗೋಣ !”

“ಎಲ್ಲಿಗೆ ?”

“ದಾರಿ ದೊರೆತಲ್ಲಿಗೆ–ಊರವರು ಹೋದಲ್ಲಿಗೆ.”

“ಮಗು ? ಹಾಸಿಗೆ ? ಬಟ್ಟೆಗಳು ?”

“ಊಟದ ಸಾಮಗ್ರಿಯನ್ನೆಲ್ಲ ಶೇಖರಿಸಿ ಗಂಟುಕಟ್ಟು. ಬಟ್ಟೆಗಳೆಲ್ಲ

ಇಲ್ಲೆ ಕೊಳೆಯಲಿ. ನಗನಾಣ್ಯಗಳನ್ನು ಇಲ್ಲಿ ತಾ, ಪೆಟ್ಟಿಗೆಯಲ್ಲಿ ತುಂಬೋಣ. ಪಿನಾಕಿನಿ ಎಲ್ಲಿ ?"

"ಏನಣ್ಣ ?" ಎನ್ನುತ್ತ ಪಿನಾಕಿನಿ ಅಡಿಗೆ ಮನೆಯಿಂದ ಓಡಿಬಂದಳು.

ರಾಮಕೃಷ್ಣನೂ ರೋಹಿಣಿಯೂ ಅವಸರವಸರವಾಗಿ ಗಂಟುಕಟ್ಟಿದರು. ಅಗತ್ಯವಾಗಿ ಬೇಕಾಗಿದ್ದ ಬಟ್ಟೆಗಳದೊಂದು ಗಂಟು. ಅಕ್ಕಿ ಬೇಳೆ ಇತ್ಯಾದಿ ತಿನಸಿನ ಪದಾರ್ಥಗಳದೊಂದು ಮೂಟೆ. ಬೆಳ್ಳಿಯ ಪಾತ್ರೆಗಳು, ಜರತಾರಿ ಸೀರೆಗಳು, ನಗಗಳು, ಇವುಗಳ ಪೆಟ್ಟಿಗೆಯೊಂದು. ಉಳಿದುವೆಲ್ಲ ಅಲ್ಲಿಯೇ ಬಿಟ್ಟು ನಡೆದರು. ಹಣ ರಾಮಕೃಷ್ಣನ ನಡುವಿನಲ್ಲಿ ಭದ್ರವಾಗಿತ್ತು. ರೈಲ್ವೇ ಸ್ಟೇಷನಿಗೆ ಸಾಮಾನು ಸಾಗಿಸಿದರು ಪ್ರೋಮ್ ನಗರಕ್ಕೆ ಟಿಕಿಟ್ ತೆಗೆದು ಕೊಳ್ಳಬೇಕು. ಒಂದು ಟಿಕೆಟ್ಟಿಗೆ ನಾಲ್ಕು ರೂಪಾಯಿ. ಎರಡೂವರೆ ಟಿಕೆಟ್ಟಿಗೆ ಹತ್ತು ರೂಪಾಯಿ. ಆದರೆ ಟಿಕೆಟ್ ದೊರೆಯುವಂತಿರಲಿಲ್ಲ. ಬುಕ್ಕಿಂಗ್ ಕಿಟಿಕಿಯ ಸುತ್ತು ದೊಂಬಿಯೋ ದೊಂಬಿ. ಪೋಲೀಸಿನವರು ಹೇರ ಳವಾಗಿ ಗದ್ದಲ ಮಾಡುತ್ತಿದ್ದರು. ಅವರಲ್ಲಿ ನಾಲ್ಕೈದು ಮಂದಿಗೆ ಘಾಯ.

"ಪ್ರೋಮಿಗೆ ಎರಡೂವರೆ ಟಿಕೆಟ್ ತೆಗೆದುಕೊಡಿರಯ್ಯ, ನಿಮಗೆ ಪುಣ್ಯ ಬರುತ್ತೆ" ರಾಮಕೃಷ್ಣ ಕಾನ್‌ಸ್ಟೇಬಲೊಬ್ಬನನ್ನು ಕೇಳಿಕೊಂಡ.

"ಪುಣ್ಯವೇನು ಪಾಪವೇನ್ರೀ ? ಗುಂಪು ನೋಡಿದಿರೋ ಇಲ್ಲೋ ?"

"ಇದು ನೋಡಿ ನಾಲ್ಕು ವರ್ಷದ ಕೂಸು. ಈಕೆ ಗರ್ಭಿಣಿಯಾದ ಹೆಂಗಸು. ಇವರನ್ನು ಬಿಟ್ಟು ನಾನು ಹೋಗಲಾರೆ. ಅದಕ್ಕೇ ನಿಮ್ಮನ್ನು ಕೇಳಿಕೊಳ್ಳುತ್ತೇನೆ. ಕೊಳ್ಳಿ ಐವತ್ತು ರೂಪಾಯಿ ನೋಟು. ನಮಗೆ ಎರಡೂವರೆ ಟಿಕೆಟ್ ತಂದುಕೊಟ್ಟು ಚಿಲ್ಲರೆ ನೀವೇ ಇಟ್ಟುಕೊಳ್ಳಿ."

"ಕೊಡಿ, ನಿಮ್ಮ ಅದೃಷ್ಟ ನೋಡೋಣ. ಒಳಗೆ ಹೋಗಿ ಟಿಕೆಟ್ ಕೇಳುತ್ತೇನೆ....ಈ ಸಾಮಾನೆಲ್ಲ ತೆಗೆದುಕೊಂಡು ಹೋಗಲಾಗದು. ಸ್ಟೇಷನಿ ನಲ್ಲೇ ಇಟ್ಟುಬಿಡಿ. ರೈಲಿನಲ್ಲಿ ಇವಕ್ಕೆ ಜಾಗವಿಲ್ಲ."

"ಇವು ಆಹಾರದ ಗಂಟು ಕಣ್ರಿ"

"ಜನಗಳು ಕೂಡುವುದಕ್ಕೆ ತಿಕ್ಕಾಟವಾಗಿದೆ. ಆಹಾರದ ಗಂಟಂತೆ ಆಹಾರದ ಗಂಟು. ನಿಮಗೆ ಅಷ್ಟು ಪ್ರಿಯವಾಗಿದ್ದರೆ ಪ್ರಯಾಣಕ್ಕೆ ಬೇರೆ ದಾರಿ ಹುಡುಕಿಕೊಳ್ಳಿ. ತನ್ನಿ ಸಾಮಾನು."

ರಾಮಕೃಷ್ಣ ಮರುಮಾತಾಡದೆ ಸಾಮಾನುಗಳನ್ನೆಲ್ಲ ಕಾನ್ಸ್ಟೇಬಲ್ ವಶಕ್ಕೆ ಕೊಟ್ಟು ರೈಲು ಹತ್ತಿದ. ಪ್ರೋಮ್ ನಗರದಲ್ಲಿಳಿದು ಸ್ಥಿತಿಗತಿಗಳು ಶಾಂತಿಯಾಗುವವರೆಗೆ ಅಲ್ಲಿಯೇ ಉಳಿದುಕೊಳ್ಳಬೇಕೆಂದು ಅವನ ಉದ್ದಿಶ್ಯ. ಆದರೆ ಅದು ಸಾಧ್ಯವಾಗುವಂತಿರಲಿಲ್ಲ. ಬರ್ಮೀಯರಲ್ಲಿ ಹೆಚ್ಚುಪಾಲು ರಾಜದ್ರೋಹಿಗಳಾಗಿದ್ದುದರಿಂದ ಭಾರತೀಯರನ್ನು ಕಂಡಕಂಡೆಡೆ ಹೊಡೆದು ಕೊಂದುಹಾಕುತ್ತಿದ್ದರು. ಈಗಾಗಲೇ ಎಷ್ಟೋಮಂದಿ ಸಾಹುಕಾರರನ್ನು ಸುಲಿಗೆ ಮಾಡಿದ್ದರು. ಹಲವರನ್ನು ಕೊಂದುಹಾಕಿದ್ದರು. ಇವರ ಕಾಟ ವನ್ನು ತಪ್ಪಿಸಿಕೊಳ್ಳಲು ಎಷ್ಟೋಮಂದಿ ಅಡವಿಗಳಿಗೆ ಹೋಗಿ ಗುಡಿಸಲು ಹಾಕಿಕೊಂಡಿದ್ದರಂತೆ. ಅನೇಕರು ಷಿ್ ಬೆಟ್ಟಗಳನ್ನು ದಾಟಿ ಚಿತ್ತಗಾಂಗಿಗೆ ಹೋಗಿ ಭರತಖಂಡಕ್ಕೆ ಹಿಂತಿರುಗಿದ್ದರು.

ರೈಲಿನಲ್ಲಿ ಕೂತಿದ್ದಾಗ ಜತೆಯಲ್ಲಿ ಬಂದ ಸಾಬಿಯು ಈ ಸಂಗತಿ ಯನ್ನೆಲ್ಲ ಹೇಳಿದ.

"ನೀವೆಲ್ಲ ಎಲ್ಲಿ ಹೋಗುತ್ತಿದೀರಿ ?" ಎಂದು ಕೇಳಿದ ರಾಮಕೃಷ್ಣ ಸಾಬಿಯನ್ನು.

"ನಾವೂ ಷಿ್ ಬೆಟ್ಟಗಳನ್ನು ದಾಟಿ ನಮ್ಮ ದೇಶಕ್ಕೆ ಹಿಂತಿರುಗುತ್ತೇವೆ. ನೀವೂ ಬರುತ್ತೀರೇನು ? ನಿಮ್ಮೂರಾವುದು ?"

"ಮೈಸೂರು ಸೀಮೆ. ಬೆಟ್ಟಗಳನ್ನು ದಾಟಲು ರೈಲು ಹಾಕಿಲ್ಲವಲ್ಲ, ಮೋಟಾರು ಹೋಗುತ್ತೇನು ?"

"ಕಾಲ್ನಡೆ. ನೂರಿನ್ನೂರು ಮೈಲಿ ಆಗಬಹುದು"

"ಹೆಂಗಸರು ? ಮಕ್ಕಳು ?"

"ನಡೆಯಬೇಕು. ಬರುವುದಾದರೆ ಬನ್ನಿ. ಇನ್ನು ಈ ದೇಶದಲ್ಲಿ ನಮಗೆ ಉಳಿಗಾಲವಿಲ್ಲ. ನೋಡಿ, ಇವರೆಲ್ಲ ನಮ್ಮ ಮಕ್ಕಳು. ಎಲ್ಲರನ್ನೂ ಕರೆದುಕೊಂಡು ಹೋಗುತ್ತಿದೇವೆ."

"ಅದೇಕೆ ಆ ಹುಡುಗಿ ಅಳುತ್ತಿದೆಯಲ್ಲ ?"

"ಅದನ್ನೆಲ್ಲ ಹೇಳಿಕೊಳ್ಳಲು ಪುರಸತ್ತಿಲ್ಲ. ಅವಳು ನನ್ನ ಎರಡನೇ ಮಗಳು. ಹೋದ ವರ್ಷ ತಾನೇ ಮದುವೆ ಮಾಡಿಕೊಟ್ಟೆ. ಅಳಿಯನಿಗೆ ಅಕ್ಕಿ ಮಂಡಿಯಲ್ಲಿ ಕೆಲಸ. [illegible] ಬಿಟ್ಟುಹೋದವನು ತಿರುಗಿ

ಬರಲಿಲ್ಲ. ಅವನಿಗಾಗಿ ಕಾದುಕೊಂಡಿದ್ದರೆ ಮನೆಮಂದಿಯ ಪ್ರಾಣಕ್ಕೆ ಆಪತ್ತು ಬಂದೀತೆಂದು ಅವನನ್ನು ಹಿಂದೆಯೇ ಬಿಟ್ಟು ನಾವೆಲ್ಲ ಬಂದು ಬಿಟ್ಟೆವು. ಪ್ರಾಣಕ್ಕಿಂತ ಹೆಚ್ಚಿನ ವಸ್ತು ಏನಿದೆ ಸ್ವಾಮಿ ಜಗತ್ತಿನಲ್ಲಿ?"

"ನಿಮ್ಮ ಹೆಸರೇನು ಹೇಳಿದಿರಿ?"

"ಮಹಮ್ಮದ್ ಸುಲ್ತಾನ್. ನಮ್ಮದು ಮಧುರೆ ಜಿಲ್ಲೆ" ಎನ್ನುತ್ತ ತನ್ನ ಕತೆಯನ್ನು ಹೇಳತೊಡಗಿದ. ಅವನು ರಾಹುತರ ಜಾತಿ. ಬಾಲ್ಯದಲ್ಲೇ ರಂಗೂನಿಗೆ ಬಂದು ನೆಲೆಸಿದನು. ಹಲಗೆಯ ಕಸುಬಿನಲ್ಲಿ ಸೇರಿ ಹೇರಳವಾಗಿ ಹಣ ಸಂಪಾದಿಸಿದ. ಮಧುರೆಯಿಂದ ತನ್ನ ಅಣ್ಣತಮ್ಮಂದಿರನ್ನು ಕರೆಸಿ ಕೊಂಡ. ರಂಗೂನಿನಲ್ಲಿಯೇ ರಾಹುತರ ಮನೆತನದಲ್ಲಿ ಮದುವೆ ಆಯಿತು. ಮಕ್ಕಳಾದುವು. ಭೂಮಿಕಾಣಿಗಳನ್ನು ಮಾಡಿಕೊಂಡ. ನಾಲ್ಕೈದು ಮನೆಗಳನ್ನು ಸ್ವಂತವಾಗಿ ಕಟ್ಟಿಸಿದ. ಬಾಡಿಗೆ ತಿಂಗಳಿಗೆ ಮುನ್ನೂರು ರೂಪಾಯಿ ಬರುತ್ತಿತ್ತು. ಈಗ ಎಲ್ಲವನ್ನೂ ಬಿಟ್ಟು ಸಂಸಾರಸಮೇತನಾಗಿ ಸ್ವದೇಶಕ್ಕೆ ತೆರಳಿದ್ದ.

"ಈ ರೋಗದಿಂದ ಜನಕ್ಕೆ ಎಷ್ಟು ಕಷ್ಟ ನಷ್ಟ!"

"ಅನುಭವಿಸಬೇಕು ಸ್ವಾಮಿ, ಅನುಭವಿಸಬೇಕು. ನಾವು ಈ ಊರಿಗೆ ಬಂದಾಗ ಈ ಸೊತ್ತನ್ನೆಲ್ಲ ಹೊತ್ತುಕೊಂಡು ಬರಲಿಲ್ಲವಲ್ಲ? ಅವ ರನ್ನು ದಬಾಯಿಸಿ ಇವರಿಗೆ ದಗಾ ಹಾಕಿ ರೂಪಾಯಿಗೆ ನಾಲ್ಕಾಣೆ ಐದಾಣೆ ಬಡ್ಡಿ ವಸೂಲುಮಾಡಿ ಗಂಟುಕಟ್ಟಿದೆವು. ಹೀಗೆಲ್ಲ ಅಕ್ರಮದಿಂದ ಸಂಪಾದಿ ಸಿದ ದುಡ್ಡು ನಿಲ್ಲುತ್ತೆಯೆ ಹೇಳಿ. ಎಂದಾದರೊಂದುದಿನ ಈ ದುಡ್ಡನ್ನೂ ಇದುವರೆಗೆ ಸುಖವಾಗಿ ಕೂತುಂಡ ಸುಖವನ್ನೂ ಕಕ್ಕಲೇ ಬೇಕು."

ರಾಮಕೃಷ್ಣನು ಬೇರೊಂದು ಕಡೆ ಯೋಚಿಸುತ್ತಿದ್ದ. ಅವನಿಗೆ ಈಗ ಎಲ್ಲಿ ಹೋಗುವುದೆಂಬ ಚಿಂತೆ. ರೋಹಿಣಿಗೆ ಆರು ತಿಂಗಳು ತುಂಬಿತ್ತೋ. ರಂಗೂನಿನಲ್ಲಿದ್ದಾಗ ಮಹಡಿಯಿಂದಿಳಿದು ಸಿನಿಮಾಕ್ಕೆ ಹೋಗುವುದೆಂದರೇನೇ ಪ್ರಯಾಸವಾಗಿತ್ತು. ಈಗ ಷಿನ್ ಬೆಟ್ಟಗಳನ್ನು ನಡೆದು ದಾಟಬೇಕೆಂದರೆ ಗಡುತರವಾದ ಕೆಲಸವಾಗಿತ್ತು. ಪ್ರೋಮ್‌ನಲ್ಲಿಯೇ ಉಳಿದುಕೊಳ್ಳೋಣ ವೆಂದರೆ ಅದೂ ಆಗದ ಕೆಲಸ. "ಏನು ಮಾಡೋಣ ರೋಹಿಣಿ?" ಎಂದು ಹೆಂಡತಿಯನ್ನು ಕೇಳಿದ.

"ಇಲ್ಲಿಯೇ ಉಳಿದುಕೊಂಡರೆ ಸೀಳಿಹಾಕುತ್ತಾರಲ್ಲ. ನೋಡೋಣ ನಡೆಯಿರಿ. ಮೆಲ್ಲಗೆ ನಡೆದುಕೊಂಡು ಹೋದರಾಯ್ತು. ನಮ್ಮ ಜೀವ ಹೆಚ್ಚಲ್ಲ; ಪಿನಾಕಿನಿ ಬದುಕಿದರೆ ನನಗಷ್ಟೇ ಸಾಕು."

○ ○ ○ ○

ಎಲ್ಲರೂ ಪ್ರೋಮ್‌ನಗರದಲ್ಲಿಳಿದರು. ಅಲ್ಲಿಂದ ಮುಂದೆ ರೈಲಿಲ್ಲ. ಇದ್ದ ಒಂದೆರಡು ಮೋಟಾರುಗಳು ಯುದ್ಧಕ್ಕೆ ಹೋಗಿದ್ದವು. ಕುದುರೆ ಗಾಡಿಗಳು, ಎತ್ತಿನ ಗಾಡಿಗಳು, ಕೋಣದ ಗಾಡಿಗಳು ಸಹ ಯುದ್ಧದ ಸರಬರಾಯಿಗೆ ಹೋಗಿದ್ದವು.

"ಈಗೇನು ಮಾಡೋಣ ಸುಲ್ತಾನ್?"

"ಗಾಡಿ ಹೊಡೆಯುವವರ ಮರ್ಮ ನನಗೆ ಗೊತ್ತು ಸ್ವಾಮಿ. ಬಾಡಿಗೆ ಸ್ವಲ್ಪ ಜಾಸ್ತಿ ಕೊಡುತ್ತೇವೆಂದರೆ ರೊಪ್ಪದಲ್ಲಿ ಬೈತಿಟ್ಟಿರುವ ಗಾಡಿಗಳು ತಾನಾಗಿ ಬರುತ್ತವೆ."

"ಬಾಡಿಗೆ ಎಷ್ಟಾದರೂ ಕೊಡೋಣ. ನಾನು ಬೇಕಾದರೆ ನಡೆದು ಕೊಂಡು ಬರುತ್ತೇನೆ. ಹೆಂಗಸು ಮಕ್ಕಳಿಗೆ ಒಂದು ಗಾಡಿ ಸಿಕ್ಕಿಬಿಟ್ಟರೆ ನಿಮ್ಮ ಸಹಾಯ ಎಂದೆಂದಿಗೂ ಮರೆಯೊಲ್ಲ."

"ಛೆ, ಹಾಗೆಲ್ಲ ಹೇಳಬೇಡಿ. ನಾನೂ ಹಾಗೆಯೇ ಮಾಡಬೇಕೂಂತಿ ದೇನೆ. ಎರಡು ಗಾಡಿ ಆದರೆ ಸಾಕಲ್ಲ? ಹೆಂಗಸರು ಮಕ್ಕಳು ಅದರಲ್ಲಿ ಕೂತು ಬರಲಿ. ನಾವೆಲ್ಲ ನಡೆದುಕೊಂಡು ಹೋಗೋಣ."

ಮಹಮದ್ ಸುಲ್ತಾನ್ ಊರೊಳಗೆ ಹೋಗಿ ಎರಡು ಗಾಡಿಗಳನ್ನು ಹಿಡಿದುಕೊಂಡು ಬಂದ. ಅಂಗಡಿಯಲ್ಲಿ ಹದಿನೈದು ಇಪ್ಪತ್ತು ದಿನಕ್ಕಾಗು ವಷ್ಟು ಸಾಮಗ್ರಿಗಳನ್ನು ಕೊಂಡು ಗಾಡಿಯಲ್ಲಿ ಹೇರಿದರು. ಸುಲ್ತಾನ್ ಮನೆಯ ಇಬ್ಬರು ಹೆಂಗಸರು ಮೂವರು ಮಕ್ಕಳು ಒಂದು ಗಾಡಿಯಲ್ಲಿ ಕೂತರು. ಗಂಡನನ್ನು ಬಿಟ್ಟು ಬಂದ ಸುಲ್ತಾನನ ಮಗಳು, ರೋಹಿಣಿ, ಪಿನಾಕಿನಿ ಇನ್ನೊಂದು ಗಾಡಿಯಲ್ಲಿ ಕೂತರು. ಸುಲ್ತಾನನ ಅಣ್ಣ, ತಮ್ಮ, ಅಣ್ಣನ ಮಗ, ರಾಮಕೃಷ್ಣ ಈ ಐದು ಮಂದಿ ನಡೆದರು. ಸುಲ್ತಾನನ ಅಣ್ಣ ಒಳ್ಳೆ[illegible]ಗಾರ ಬಾಯಲ್ಲಿ ಎಲೆ ಅಡಿಕೆ ಹೊಗೆಸೊಪ್ಪನ್ನು

ಜಗಿಯುತ್ತ ಮಾತಿಗಾರಂಭಿಸಿದರೆ ದಾರಿ ನಡೆಯುವುದೂ ತಿಳಿಯುವುದಿಲ್ಲ, ಹೊತ್ತು ಮುಳುಗುವುದೂ ತಿಳಿಯುವುದಿಲ್ಲ.

ರೋಹಿಣಿಯು ಪ್ರಯಾಣವನ್ನು ಬಹಳ ಕಷ್ಟದಿಂದ ಸಹಿಸಿಕೊಂಡಳು. ಗಾಡಿಯು ಅಡ್ಡಾದಿಡ್ಡನಾಗಿ ಹೋಗುತ್ತಿದ್ದರೆ ಇವಳ ಹೊಟ್ಟೆಯಲ್ಲೂ ಸಹಿಸಲಾರದಷ್ಟು ಬಾಧೆಯುಂಟಾಗುವುದು. ವಾಂತಿಯಾಗುವ ಹಾಗೆ ಅನ್ನಿಸುವುದು. ಎಲ್ಲವನ್ನೂ ಹಲ್ಲುಕಚ್ಚಿಕೊಂಡು ಸಹಿಸಿದಳು. ಬಿಸಿಲೇರಿದಾಗ ನೀರಿದ್ದ ಕಡೆ ನೋಡಿ ಗಾಡಿಯು ನಿಲ್ಲುವುದು ಆಗ ಅವಳಿಗೆಷ್ಟೋ ನೆಮ್ಮದಿ. ಇಳಿದು ಬೆಂಕಿಹೊತ್ತಿಸಿ ಅನ್ನವನ್ನು ಬೇಯಿಸಿ ಉಪ್ಪು ಮೆಣಸಿನಕಾಯನ್ನು ಕಲೆಸಿ ಎಲ್ಲರೊಡನೆ ತಿನ್ನುವಳು. ಅನಂತರ ಟೀ ಕಷಾಯವನ್ನು ಮಾಡುವಳು. ಹಳ್ಳಿ ಸಮೀಪದಲ್ಲಿದ್ದು ಹಾಲು ದೊರಕಿದರೆ ಹಾಲನ್ನು ಸೇರಿಸಿ ಟೀ ಕುಡಿಯುವರು. ಹಾಲು ಸಿಗದಿದ್ದರೆ ಬರೀ ಕಷಾಯ–ಸಕ್ಕರೆ.

ಊಟಮಾಡಿದ ಬಳಿಕ ಎಲ್ಲರೂ ಮಲಗಿ ನಿದ್ದೆಮಾಡುವರು. ಬಿಸಿಲಿಳಿದ ಮೇಲೆ ಎದ್ದು ಮತ್ತೆ ಪ್ರಯಾಣ.

ಅಕ್ಯಾಬ್‌ನಗರದ ಮೂಲಕ ಕಾಕ್ಸ್ ಬಜಾರನ್ನು ಸೇರುವ ವೇಳೆಗೆ ಹನ್ನೆರಡು ದಿನಗಳಾದುವು. ಅಲ್ಲಿ ಒಂದೆರಡು ದಿನಗಳು ಸುಧಾರಿಸಿಕೊಂಡರು. ಅಲ್ಲಿಂದ ಷಿ ಬೆಟ್ಟಗಳನ್ನು ದಾಟಿ ಚಿತ್ತಗಾಂಗನ್ನು ಸೇರಬೇಕು. ಅಂಗಡಿಯಲ್ಲಿ ಒಂದು ತಿಂಗಳಿಗಾಗುವಷ್ಟು ಸಾಮಗ್ರಿಗಳನ್ನು ಕೊಂಡುಕೊಂಡರು. ಮಹಮದ್ ಸುಲ್ತಾನನ ಎರಡು ಎಳೆಯ ಮಕ್ಕಳನ್ನೂ ಪಿನಾಕಿನಿಯನ್ನೂ ಬೆಟ್ಟ ದಾಟುವ ತನಕ ಎತ್ತಿಕೊಂಡು ಬರಲು ಆಳಿಗೆ ಐವತ್ತು ರೂಪಾಯಂತೆ ಕೂಲಿಯಾಳುಗಳನ್ನು ಹುಡುಕಿ ತಂದರು. ತಿಂಡಿ ಸಾಮಗ್ರಿಗಳನ್ನು ಸಾಗಿಸಿಕೊಂಡು ಬರಲು ಎರಡು ಕತ್ತೆಗಳನ್ನು ಐವತ್ತು ರೂಪಾಯಿ ಬಾಡಿಗೆಗೆ ನೇಮಿಸಿದರು. ಗರ್ಭಿಣಿಯಾದ ರೋಹಿಣಿಯನ್ನು ಕೂರಿಸಿಕೊಂಡು ಹೋಗಲು ಡೋಲಿಗಳನ್ನು ವಿಚಾರಿಸಿದರು, ದೊರೆಯಲಿಲ್ಲ. ಆದ್ದರಿಂದ ಅವಳು ಇತರರೊಡನೆ ನಡೆದು ಹೋಗಬೇಕಾಯಿತು.

ಮೊದಲಿನ ದಿನವೇ ಬೆಟ್ಟದ ಬುಡವನ್ನು ಸೇರಿದರು. ಎರಡನೇ ದಿನ ಕೆಳಉಸಿರು ಮೇಲುಸಿರಿನಿಂದ ರೋಹಿಣಿ ಬೆಟ್ಟವನ್ನು ಹತ್ತಿದಳು. ಆ ರಾತ್ರಿ

ಅನ್ನವನ್ನು ಬೇಯಿಸಿ ತಿಂದ ಬಳಿಕ ಸುತ್ತಲೂ ಬೆಂಕಿಹಾಕಿ ನಡುವೆ ಎಲ್ಲರೂ ಮಲಗಿದರು. ಚಳಿಗಾಳಿಯು ಮೈಯನ್ನು ಕೊರೆಯುತ್ತಿತ್ತು. ರಾಮಕೃಷ್ಣ ಕಾಕ್ಸ್ ಬಜಾರಿನಲ್ಲಿ ತಮ್ಮ ಮೂವರಿಗೂ ಉಣ್ಣೆಯ ಅಂಗಿಗಳನ್ನೂ ಕಂಬಳಿಗಳನ್ನೂ ಕೊಂಡು ಬಂದಿದ್ದ. ಅವುಗಳನ್ನು ಮೈತುಂಬ ತೊಟ್ಟುಕೊಂಡು ಮೂವರೂ ಒಬ್ಬರ ಪಕ್ಕದಲ್ಲೊಬ್ಬರು ಮಲಗಿದ್ದರು. ರಾತ್ರಿ ಒಂದು ಹೊತ್ತಿನಲ್ಲಿ ರೋಹಿಣಿಗೆ ಎಚ್ಚರವಾಯಿತು. ಹೊಟ್ಟೆಯಲ್ಲಿ ಸಹಿಸಲಾರದಷ್ಟು, ಬಾಧೆ. ಆ ಕಡೆ ಈ ಕಡೆ ಹಿಸುಕಿಕೊಳ್ಳುತ್ತ ಅಳುತ್ತಿದ್ದಳು.

"ರೋಹಿಣಿ, ಯಾಕೆ ಅಳುತ್ತಿದ್ದೀ?"

"ಯಾಕೂ ಇಲ್ಲ, ಯಾರನ್ನಾದರೂ ಎಬ್ಬಿಸಬಾರದೆ?"

"ಯಾರನ್ನೆಬ್ಬಿಸಬೇಕು, ನಾನಿದೇನಲ್ಲ?"

"ಅಯ್ಯೋ, ನೀವು ಬೇಡಾ ಅಂದ್ರೆ, ಹೆಂಗಸರನ್ನೆಬ್ಬಿಸಿ"

"ನಿದ್ದೆ ಹೋಗ್ತಿದಾರೆ ಕಣೆ. ಏನು ಬೇಕು ಹೇಳು. ಹೊರಗೆ ಹೋಗಬೇಕೇ?"

"ಹೆಂಗಸರನ್ನೆಬ್ಬಿಸೀಂದ್ರೆ. ಪ್ರಾಣ ಹೋಗ್ತಿದೆ. ನಿಮಗೆ ಗೊತ್ತಾಗಿಲ್ಲ. ಅಯ್ಯೋ, ಅಮ್ಮಾ...."

"ಏಕಮ್ಮ ಹಾಗೆ ಕೂಗಿಕೊಳ್ಳುತ್ತೀರಿ? 'ಎಂದು ಕೇಳುತ್ತ ಸುಲ್ತಾನನ ಹೆಂಡತಿ ಎದ್ದು ಹತ್ತಿರ ಬಂದಳು.' ಏನಾಗುತ್ತೆ?"

"ಅಮ್ಮಾ, ನೀವಾದರೂ ನಮ್ಮ ಸಮಯಕ್ಕೆ ಬಂದಿರಲ್ಲ. ನೀವೇ ನನಗೆ ತಾಯಿ ತಂದೆ. ಹೊಟ್ಟೆಯಲ್ಲಿ ಚಳಕು ವಿಪರೀತವಾಗಿದೆ. ಅಯ್ಯೊಪ್ಪ, ಅಮ್ಮಯ್ಯ...."

"ಹಾಗೇ ಮಲಗಿಕೊಳ್ಳೀಮ್ಮ. ಕೂತುಕೊಂಡಿದ್ದರೆ ಸುಸ್ತಾಗುತ್ತೆ. ಹಾಗೇ...." ಎನ್ನುತ್ತ ಸುಲ್ತಾನನ ಹೆಂಡತಿ ರೋಹಿಣಿಯನ್ನು ಮಲಗಿಸಿದಳು. ಹೊದ್ದಿಕೆಯೊಳಗೆ ಕೈತೂರಿಸಿ ಹೊಟ್ಟೆಯನ್ನು ಮುಟ್ಟಿ ನೋಡಿದಳು. ರೋಹಿಣಿ ಗಂಡನನ್ನು ಕುರಿತು "ನೀವೆಲ್ಲಾದರೂ ಹೊರಗೆ ಹೋಗಬಾರದೆ?" ಎಂದಳು.

"ಸರಿ'' ಎನುತ್ತ ರಾಮಕೃಷ್ಣನೆದ್ದು ಕಂಬಳಿಯನ್ನು ಹೊದ್ದುಕೊಂಡು ಆರಿಹೋಗುತ್ತಲಿದ್ದ ಬೆಂಕಿಯನ್ನು ದಾಟಿಕೊಂಡು ಹೊರಗೆ ಹೋದ. ಮನಸ್ಸಿನಲ್ಲಿ ನಾನಾ ಯೋಚನೆ. ದೇವರ ದಯೆಯಿಂದ ರೋಹಿಣಿ ಈ ಕುತ್ತಿನಿಂದ ಪಾರಾದರೆ ಆಮೇಲೆ ನಿರಾಯಾಸವಾಗಿ ಬೆಟ್ಟವನ್ನು ದಾಟಿ ಚಿತ್ತಗಾಂಗಿಗೆ ಸೇರಬಹುದು. ಅಲ್ಲಿಂದ ರೈಲು ಹತ್ತಿದರೆ ಕೂತ ಕಾಲಿನಲ್ಲಿ ಬೆಂಗಳೂರು ಸೇರಬಹುದು. ಸೊಸೆಯನ್ನೂ ಮೊಮ್ಮಗಳನ್ನೂ ಕಂಡು ತಾಯಿ ಎಷ್ಟು ಸಂತೋಷಪಡುತ್ತಾರೋ! ಹಿಂದಿನದೆಲ್ಲ ಮರೆತು ಈಗ ರೋಹಿಣಿಯನ್ನು ಉಲ್ಲಾಸದಿಂದ ತಬ್ಬಿಕೊಳ್ಳುವರು. ಬೆಟ್ಟಗಳನ್ನೆಲ್ಲ ಕಾಲ್ನಡೆಯಿಂದಲೇ ದಾಟಿ ಬಂದೆವೆಂದು ಹೇಳಿದಾಗ ಎಷ್ಟು ಕನಿಕರ ಪಡುತ್ತಾರೋ! ಇನ್ನು ಎಂದೆಂದಿಗೂ ರಂಗೂರ್ ಸಹವಾಸ ಬೇಡಪ್ಪ. ಜಪಾನರು ಸೋತು ಬರ್ಮಾ ಮತ್ತೆ ನಮ್ಮ ವಶವಾಗಿ ನಮ್ಮನ್ನೆಲ್ಲ ಮತ್ತೆ ರಂಗೂನಿಗೆ ಬನ್ನಿರೆಂದು ಸಾವಿರ ರೂಪಾಯಿ ಸಂಬಳಕೊಟ್ಟು ಕರೆದರೂ ಬೇಡಪ್ಪ. ತಾಯ್ನಾಡಿನಲ್ಲಿ ಕೂಲಿ ಸಂಪಾದಿಸಿ ಜೀವನ ಮಾಡೋಣ. ಅಲ್ಲಿ ಮೈದುಡಿಯ ಕಷ್ಟಪಟ್ಟರೂ ಮನಸ್ಸಿಗೆ ಆರಾಮವುಂಟು. ಇಲ್ಲಿ ಮೈ ದುಡಿಯದೆ ಕೈತುಂಬ ಹಣ ಬಂದರೂ ಮನಸ್ಸಿಗೆ ಸುಖವಿಲ್ಲ. ಅಲ್ಲಿ ತಂದೆ, ತಾಯಿ, ಬಂಧು, ಬಳಗ, ಇವರೊಡನೆ ಓಲಾಡಿಕೊಂಡಿರಬಹುದು. ತನ್ನವರೆಂಬ ಜನವಿಲ್ಲದ ಈ ಕೊಂಪೆಯಲ್ಲಿ ಜನಗಳಿದ್ದರೂ ಒಂದೆ, ದನಗಳಿದ್ದರೂ ಒಂದೆ. ಪಿನಾಕಿನಿಯ ಹೆರಿಗೆಗೆ ಜನಸಹಾಯವಿಲ್ಲದ್ದರಿಂದ ದುಡ್ಡನ್ನು ನೀರಿನಂತೆ ಸುರಿಯಬೇಕಾಯ್ತು. ಆದರೂ ಸರಿಯಾದ ಶಿಶ್ರೂಷೆಯಿಲ್ಲ. ಬರ್ಮೀಯರ ಆಸ್ಪತ್ರೆಯಾದ್ದರಿಂದ ಭಾರತೀಯರಿಗೆ ಸಮರ್ಪಕವಾದ ಆರೈಕೆಯಿಲ್ಲ. ನರ್ಸುಗಳಿಗೆ ಎಡೆಬಿಡದೆ ಕೈಬೆಚ್ಚಗೆಮಾಡಿ ಹೆರಿಗೆ ನಡೆಸಿದ್ದಾಯ್ತು. ನಮ್ಮ ಬೆಂಗಳೂರಲ್ಲಾದರೆ ಇಷ್ಟೆಲ್ಲ ಪ್ರಯಾಸವೆಲ್ಲಿಯದು? ಬೆಂಗಳೂರು ಎಷ್ಟಾದರೂ ನಮ್ಮ ಬೆಂಗಳೂರು! ಇನ್ನೇನು, ಅಲ್ಲಿಗೇ ಹೋಗುತ್ತಿದ್ದೇವಲ್ಲ....

ಹೀಗೆ ನೆನೆಸಿಕೊಳ್ಳುತ್ತ ರಾಮಕೃಷ್ಣ ಅಷ್ಟುದೂರ ನಡೆದು ಹೋದ. ಮಸಕುಮಸಕಾಗಿ ಬೆಳಕು ಹರಿಯುತ್ತಿತ್ತು. ರಾತ್ರೆ ತಾವು ಇಳಿದುಕೊಂಡಿದ್ದ ಜಾಗದಕಡೆ ಹಿಂತಿರುಗಿ ನೋಡಿದ. ಜೊತೆಯವರೆಲ್ಲ ಎದ್ದು ರೋಹಿಣಿಯ ಸುತ್ತು ನಿಂತಿದ್ದರು. ರಾಮಕೃಷ್ಣ ಒಂದೇ ತವಕದಿಂದ ಓಡಿದ. ಗುಂಪಿನಲ್ಲಿ

ಜಾಗವನ್ನು ಮಾಡಿಕೊಂಡು ರೋಹಿಣಿಯ ಬಳಿ ಸಾರಿದ. ಅವಳ ಮೈತುಂಬ ಕಂಬಳಿಯು ಮುಚ್ಚಿತ್ತು.

" ರೋಹಿಣಿ, ರೋಹಿಣಿ !"

ರೋಹಿಣಿ ಕಣ್ಣುಗಳನ್ನು ಹೊರಳಿಸಿ ರಾಮಕೃಷ್ಣನನ್ನು ದಿಟ್ಟಿಸಿ ನೋಡಿದಳು. ಅವನು ಕೆಳಗೆ ಕೂತು ತೊಡೆಯ ಮೇಲೆ ಅವಳ ತಲೆಯನ್ನಿಟ್ಟುಕೊಂಡ. "ರೋಹಿಣಿ, ಮಾತಾಡಲಾರೆಯಾ ?''

ರೋಹಿಣಿ ನೆಟ್ಟ ದೃಷ್ಟಿಯಲ್ಲಿ ಗಂಡನನ್ನು ನೋಡಿದಳು–ಒಂದು ಕ್ಷಣ. ಅನಂತರ ತಲೆಯು ಚಟ್ಟನೆ ಪಕ್ಕಕ್ಕುರುಳಿತು.

" ಏಕಣ್ಣ ಅಮ್ಮ ಹಿಂಗಿದ್ದಾಳೆ?'' ಪಿನಾಕಿನಿ ಅಳುತ್ತ ಹತ್ತಿರ ಬಂದಳು.

ರಾಮಕೃಷ್ಣನಿಗೆ ಉತ್ತರ ಹೇಳಲು ತೋರಲಿಲ್ಲ. ಕಣ್ಣು ತೊಯ್ದಿತು. ಬಾಯಿ ಬಿಗಿಯಿತು. ಪಿನಾಕಿನಿಯನ್ನು ಪಕ್ಕಕ್ಕೆ ನಿಲ್ಲಿಸಿ ಎದ್ದುನಿಂತು ರೋಹಿಣಿಯ ಮುಖವು ಮುಚ್ಚುವ ಹಾಗೆ ಕಂಬಳಿಯನ್ನು ಹೊದ್ದಿಸಿಟ್ಟ.

* * *

"ಗುರುತು ಸಿಕ್ಕದಂತೆ ಆಗಿಹೋದೆಯಲ್ಲೋ ಮಗು ? ಇದೇನೇ ನಿನ್ನ ಪಿನಾಕಿನಿ ? ಬಾಮ್ಮ ನನ್ನ ಕಂದ ! ನಿನ್ನ ಎಳೆ ವಯಸ್ಸಿಗೆ ಎಷ್ಟು ಕಷ್ಟಪಡಬೇಕಾಯ್ತೆ ಮರಿ !....'' ಗೋಮತಿಬಾಯಿಯು ಮೊಮ್ಮಗಳ ಮುಂದಲೆಯನ್ನು ಮೂಸಿನೋಡುತ್ತ ಕಂಬನಿಗರೆದರು.

" ರೋಹಿಣಿಯ ತಾಯಿ ಚೆನ್ನಾಗಿದಾಳೇನಮ್ಮ ?'' ಎಂದು ರಾಮಕೃಷ್ಣ ಕೇಳಿದ.

" ರಾಮಕೃಷ್ಣ, ರೋಹಿಣಿಯೇನೋ ಒಳ್ಳೆಯಕಾಲಕ್ಕೆ ತೀರಿಕೊಂಡಳು. ಇನ್ನು ಅವಳ ಅಪ್ಪ ಅಮ್ಮನ ಮಾತೆತ್ತಬೇಡ ನೋಡು. ಅವರು ಬೌರಿಂಗ ಪೇಟೆಗೋ ಬೇತಮಂಗಲಕ್ಕೋ ವರ್ಗವಾಗಿ ವರ್ಷದ ಮೇಲೆ ಆಯ್ತು. ಮೈತೊಳಕೊಂಡು ಊಟಕ್ಕೇಳು. ನಾಳೆ ದೇವಸ್ಥಾನಕ್ಕೆ ಭತ್ಯಕೊಟ್ಟು ಅವಳ ಕರ್ಮಾದಿಗಳನ್ನು ಮಾಡುವಿಯಂತೆ.